# ಮಾನಸಿ

Jun 92

ತಿಂಗಳ ಪತ್ರಿಕೆ ಜೂನ್ ೧೯೯೨

ಹೆಣ್ಣಿಗೆ ದೈನ್ಯ ಅನಿವಾರ್ಯವಲ್ಲ

ಒಂದು ಮಾನವ ನಿರ್ಮಿತ ನರಕ

ಸಂಧ್ಯಾ ಕಾರ್ನಾಡ

ಅಂತರಂಗದುಸಿರು

ದೀಕ್ಷೆ

# ಮಾನಸ

ಸಂಪುಟ: ೫ ಸಂಚಿಕೆ: ೬

ಜೂನ್ ೧೯೯೨





ವಿಳಾಸ "ಮಾನಸ ತಿಂಗಳ ಪತ್ರಿಕೆ"
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067



ಬಿಡಿಪ್ರತಿ: 2 ರೂ.
ಸೂಚನೆ: ವಾರ್ಷಿಕ ಚಂದಾ: 20 ರೂ.
ಆಜೀವ ಚಂದಾ: 250 ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


## ಈ ಸಂಚಿಕೆಯಲ್ಲಿ..........




ಈ ಸಂಚಿಕೆಯ ಸಂಪಾದಕರು ಭಾಗೀರಥಿ ಹೆಗಡೆ.



# ಸಂಪಾದಕೀಯ

ಈಗೆರಡು ವರ್ಷಗಳ ಹಿಂದೆ ಡಾ॥ ಅನುಪಮಾ ನಿರಂಜನ ಅವರು ಸಾಪ್ತಾಹಿಕವೊಂದರಲ್ಲಿ "ಬರಹಗಾರ್ತಿಯ ಬದುಕು" ಎಂಬ ಲೇಖನ ಮಾಲೆ ಬರೆದಿದ್ದರು. ಅದರಲ್ಲಿ "ಅಡಿಗೆ ಮನೆ ಸಾಹಿತ್ಯ" ಎಂದು ಮೂಗೆಳೆಯುವವರಿಗೆ "ಮಹಿಳಾ ಸಾಹಿತ್ಯ" ಎಂದು ಹೀಗಳೆಯುವರಿಗೆ ಕೆಲವು ಉತ್ತರಗಳಿದ್ದವು. ಆರ್ಥಿಕವಾಗಿ ಸ್ವಾವಲಂಬಿಯಾದ ವಿದ್ಯಾವಂತೆಯಾದ ತನ್ಮೂಲಕ ಬದುಕಿನ ಕೆಲವು ಸ್ವಾತಂತ್ರ ಸೌಲಭ್ಯಗಳನ್ನು ಅರಗಿಸಿಕೊಂಡ ಮಹಿಳೆಯೊಬ್ಬಳು ಬರಹಗಾರ್ತಿಯಾಗಿ ಎದುರಿಸಬೇಕಾದ ಒತ್ತಡಗಳು, ಕಷ್ಟ ನಿಷ್ಠುರಗಳು ಅದರಲ್ಲಿ ಹೃದಯ ಸ್ಪರ್ಶಿಯಾಗಿ ವಿವರಿಸಲ್ಪಟ್ಟಿವೆ.

ಅಂಥ ಧೀಮಂತ ಮಹಿಳೆಯ ಪಾಡೇ ಹಾಗಿದ್ದಾಗ ನಮ್ಮದೇನು ಮಹಾ? ಎಂದು ನಾವು ಉಪೇಕ್ಷಿಸುವಂತಿಲ್ಲ. ಮೊಧ ಮೊದಲಿನ ತೊದಲು ಮಾತು ಎಡವು ಹಜ್ಜೆಗಳನ್ನು ಉತ್ತಮ ಪಡಿಸಿಕೊಂಡು ನೈಜ ಅರ್ಥದಲ್ಲಿ ಮೌಲಿಕ ಕೃತಿಗಳ ನಿರ್ಮಾಣ ಹೆಣ್ಣಿನಿಂದ ಸಾಧ್ಯವಾಗುವ ನಿಟ್ಟಿನಲ್ಲಿ ನಾವು ಪ್ರಯತ್ನಿಸಬೇಕಾದಾಗ ಎದುರಾಗುವ ಎಡರು ತೊಡರುಗಳನ್ನು ಗಮನಿಸಬೇಕಾದುದು ಅತ್ಯವಶ್ಯಕ.

ಈ ಜಗತ್ತಿಗೆ ಕಣ್ಣು–ಕಿವಿ ತೆರೆದಂದಿನಿಂದ ದಕ್ಕುವ ಅನಭವಗಳೆಲ್ಲ ಪರಿಪಾಕಗೊಂಡು ಸಾಹಿತ್ಯ ಕೃತಿಯಾಗಿ ಪ್ರಕಟಗೊಳ್ಳುತ್ತಿದೆ. ಎಂಬ ಹೇಳಿಕೆಯ ಹಿನ್ನೆಲೆಯಲ್ಲಿ ನಮ್ಮ ಬರಹಗಾರ್ತಿಯರನ್ನು ನೋಡಿದಾಗ ಅವರಿಂದ ಶ್ರೇಷ್ಠ ಕೃತಿಗಳು ಇನ್ನೂ ಯಾಕೆ ಬಂದಿಲ್ಲಾ? ಎಂಬ ಪ್ರಶ್ನೆಗೆ ಉತ್ತರ ಸಿಗುತ್ತದೆ.

ಕೇವಲ ಗೃಹಿಣಿಯಾಗಿದ್ದುಕೊಂಡು ಕುಟುಂಬದ ಸೀಮಿತ ಚೌಕಟ್ಟಿನೊಳಗೆ ಸುತ್ತುತ್ತ. ಅದನ್ನೇ ಅಭಿವ್ಯಕ್ತಿಸುವ ಬರಹಗಾರ್ತಿಯರನೇಕರು ನಮ್ಮಲ್ಲಿದ್ದಾರೆ. ಇನ್ನು ಕೆಲವರು ಉದ್ಯೋಗಸ್ಥೆಯರಾಗಿ ಒಳಗೂ ಹೊರಗೂ ದುಡಿಯುತ್ತಾ ಯಂತ್ರಗಳಾಗಿ ಬಿಟ್ಟಿರುವ ಸಂದರ್ಭಗಳೂ ಇವೆ. ಗಂಡಿಗಾಗಲಿ, ಹೆಣ್ಣಿಗಾಗಲಿ ದುಡಿಮೆ. ಮನುಷ್ಯರಿಗೆ ಅನಿವಾರ್ಯ ಒಪ್ಪಿಕೊಳ್ಳೋಣ. ಆದರೆ ಹೆಣ್ಣು ಮನೆಯ ಸೀಮಿತ ಕ್ಷೇತ್ರ ಬಿಟ್ಟು ವಿಶಾಲ ಜಗತ್ತಿಗೆ ತನ್ನನ್ನು ಒಡ್ಡಿಕೊಳ್ಳುವಾಗ ದ್ವಿವಿಧ ಶ್ರಮದಿಂದ ಬಳಲಬೇಕಾಗುತ್ತದೆ. ಮನುಷ್ಯ ಜೀವನದ ವಿವಿಧ ಆಯಾಮಗಳ ಹುಡುಕಾಟಕ್ಕೆ ಮಹಿಳೆ ದುಪ್ಪಟ್ಟು ಬೆಲೆ ತೆರಬೇಕಾಗುತ್ತದೆ. ದುಡಿಯುವ ಹೆಂಗಸಿಗೆ ಮನೆಯೊಳಗಿನ ದುಡಿಮೆಯಿಂದ ರಿಯಾಯ್ತಿ ಸಾಧ್ಯವಿಲ್ಲ. ಕೇವಲ ಗೃಹಿಣಿ

ಯಾದವಳಿಗೆ ಮಾನವ ಜಗತ್ತಿನ ಪರಿಚಯವೇ ಸಾಧ್ಯವಾಗುವುದಿಲ್ಲ. ಇಂಥ ವಿಚಿತ್ರ ಒತ್ತಡಗಳ ನಡುವೆ ಬದುಕಿನ ಸೂಕ್ಷ್ಮಗಳಿಗೆ ಸ್ಪಂದಿಸುವ ಸಂವೇದನೆ ಸಹಜವಾಗಿಯೇ ನಾಶವಾಗಿಬಿಡುತ್ತದೆ. ಇನ್ನು ಕೆಲವು ಲೇಖಕಿಯರು ಬರಹವನ್ನೆಂದು ಹಣಗಳಿಕೆಯ ದಾರಿಯನ್ನಾಗಿ ಮಾಡಿಕೊಂಡು, ಸರಳ ರಗಳೆಗಳ ರಚನೆಯಲ್ಲ ನಿರತರಾಗಿದ್ದಾರೆ. ಇಲ್ಲವೆನ್ನುವಂತಿಲ್ಲ ಆದರೂ ಕೂಡ ನಮ್ಮ ದೇಶದ ಇಂದಿನ ಸಂಕ್ರಮಣ ಸ್ಥಿತಿಯಲ್ಲಿ, ಯಾವುದೇ ವಿಪ್ಲವಕ್ಕೂ ಹೆಣ್ಣೇ ಬಲಿಯಾಗಬೇಕಿರುವ ನಮ್ಮ ಸನ್ನಿವೇಶದಲ್ಲಿ, ನಮ್ಮ ಮಹಿಳೆಯರ ಸಾಧನೆಯನ್ನಿಟ್ಟು ನೋಡಿದಾಗ ನಿಜಕ್ಕೂ ಹೆಮ್ಮೆ ಅಲ್ಲವಾದರೂ ಸಮಾಧಾನವಂತೂ ಸಿಕ್ಕೇ ಸಿಗುತ್ತದೆ. ಬರಹಗಾರರಿಗೆ ಅತ್ಯವಶ್ಯಕವಾದ ಕೆಲವು ಮೂಲಭೂತ ಸೌಲಭ್ಯಗಳು ಹಾಗಿರಲಿ, ಬರೆಯಲು ವೇಳೆಯೇ ಸಿಗದೆ ಮನೆ ಮಂದಿಯೆಲ್ಲ ಮಲಗಿದ ಮೇಲೆ ಲೇಖನಿ ಹಿಡಿಯುವ ಲೇಖಕಿಯರನೇಕರು ನಮ್ಮಲ್ಲಿದ್ದಾರೆ. ಅಂದರೆ "ಫ್ಯಾನು-ಫೋನು-ಫ್ಯಾನು ಇದ್ದರೆ ಮಾತ್ರ ಶ್ರೇಷ್ಠ ಸಾಹಿತ್ಯ ನಿರ್ಮಾಣ ಸಾಧ್ಯ" ವೆಂದು ಇದರರ್ಥವಲ್ಲ. ಆದರೆ ಹೆಂಗಸು ಏನನ್ನೇ ಸಾಧಿಸಬೇಕಾಗಿದ್ದರೂ ಯಾವುದೇ ತೊಂದರೆ ತೊಡಕುಗಳಿಗೆ ಜಗ್ಗದ ದೃಢ ವ್ಯಕ್ತಿಯ ಮನಃಸ್ಥೈರ್ಯ ಬೆಳೆಸಿಕೊಳ್ಳಬೇಕೆಂಬುದಷ್ಟೇ ಇಲ್ಲಿಯ ಭಾವನೆ.

ಭಾಗೀರಥಿ ಹೆಗಡೆ.

## ಅಸಹಾಯಕ ಸ್ತ್ರೀಯರು

ಅಜ್ಜ ನೆಟ್ಟ ಆಲದ ಮರಕ್ಕೆ
ಜೋತು ಬೀಳೆವು ಎಂದು
ಬೊಬ್ಬಿಡುತ್ತಿದ್ದೇವೆ.........
ರಕ್ತ ಇಂಗಿದ ಎಲುಬಿನ
ಕಿರುಕಲು ಕಂಠದಿಂದ
ನೋಡುತ್ತಿದ್ದೇವೆ........
ದಾರ ಕಟ್ಟುಗಳು ಸಡಿಲಿದ ಚಪ್ಪರದ
ಲೆಕ್ಕಿಲ್ಲದ ಹರಕು ಕಿಂಡಿಗಳಿಂದ
ಕಾಣುತ್ತಿದ್ದೇವೆ.........
ಭವಿಷ್ಯದ ಆಳಕ್ಕಿಳಿದ ಕಣ್ಣಿನ
ಬತ್ತಿದ ಕಣ್ಣೀರಿನ ಪ್ರತಿಬಿಂಬಗಳಿಂದ

ಮತ್ತೆ ಸಾಗುತ್ತಿದ್ದೇವೆ
ಸೀತೆ ಮಂಥರೆ ಮಹಾದೇವಿಯರು
ನಡೆದ ದಾರಿಯಿಂದ
ಬೋರಿಡುತ್ತಿದ್ದೇವೆ......
ಮುತ್ತಜ್ಜನ ಮುದಿಗೂಡಿನ
ಮುರುಕು ತೊಲೆಗಳಿಗೆ
ಜೋತು ಬಿದ್ದ ಬಿಳಲುಗಳು
'ನಾವು'
ಅಜ್ಜ ನೆಟ್ಟ ಆಲದ ಮರಕ್ಕೆ
ಜೋತು ಬೀಳೆವು ಎಂದು

ವಿದ್ಯಾ ಕುಂದರಗಿ.

# ಹೆಣ್ಣಿಗೆ ದೈನ್ಯ ಅನಿವಾರ್ಯವಲ್ಲ

## ಮುಕ್ತಿದತ್ತಾ

ಸಂದರ್ಶನ:- ಉಷಾರಾಣಿ.

ಮುಕ್ತಿದತ್ತಾ ಒಬ್ಬ ಪರಿಸರ ಚಳವಳಿಗಾರ್ತಿ. ೧೯೮೯ರಲ್ಲಿ ಅವರು ಅಂದಿನ ಕೇಂದ್ರ ಪರಿಸರ ಮತ್ತು ಅರಣ್ಯ ಮಂತ್ರಿಯಾದ ಜಡ್. ಆರ್. ಅನ್ಸಾರಿಯವರ ಮೇಲೆ ಅತ್ಯಾಚಾರ ಪ್ರಯತ್ನದ ಕೇಸು ಹಾಕಿದರು. ಮಹಿಳಾ ಸಂಘಟನೆಗಳು ಮೊದಲ ಅವರನ್ನು ಬೆಂಬಲಿಸಿದರೂ ನಂತರ ಅವರು ವಿದ್ಯಾವಂತರೂ ಹೋರಾಡುವ ಸಾಮರ್ಥ್ಯವುಳ್ಳವರೂ ಆಗಿದ್ದಾರೆಂದು ಹಿಂದೆ ಸರಿದವು. ಆರಂಭದ ದಿನಗಳಲ್ಲಿ ಅವರ ಬಗ್ಗೆ ಇದ್ದ ಸಹಾನುಭೂತಿ ಅವರ ಧೈರ್ಯಕ್ಕಾಗಿ ಮೆಚ್ಚುಗೆಗಳು ಮಾಯವಾಗಿ ಆ ಜಾಗದಲ್ಲಿ ಅವರ ನಡತೆಯ ಬಗ್ಗೆ ಆರೋಪಗಳು ಆರಂಭವಾದವು. ಇವೆಲ್ಲವುಗಳ ನಡುವೆ ಮುಕ್ತಿದತ್ತಾ ಒಬ್ಬಂಟಿಯಾಗಿ ನ್ಯಾಯಾಲಯದಲ್ಲಿ ಹೋರಾಡಿದರು. ಸದ್ಯದಲ್ಲಿ ಅವರು ತಮ್ಮ ಬಾಲ್ಯ ಸಖ ಭಗವಂತ್‌ಸಿಂಗ್ ನನ್ನು ಮದುವೆಯಾಗಲಿದ್ದಾರೆ. ಇದೀಗ ಅನ್ಸಾರಿಯವರು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದರಿಂದ ಅವರು ತನ್ನಲ್ಲಿ ಕ್ಷಮೆ ಕೇಳಿದರೆ ಕೇಸ್ ವಾಪಸು ಪಡೆದುಕೊಳ್ಳುತ್ತೇನೆಂದು ಮುಕ್ತಿ ಹೇಳಿದ್ದಾರೆ.

ಈ ಸಂದರ್ಭದಲ್ಲಿ ಅವರೊಂದಿಗೆ ನಡೆಸಿದ ಒಂದು ಆತ್ಮೀಯ ಮಾತುಕತೆ ಇಲ್ಲಿದೆ.

ಪ್ರ:- ಅಕ್ಟೋಬರ್ ೮೯ ರಲ್ಲಿ ನೀವು ಅನ್ಸಾರಿಯವರ ಮೇಲೆ ಕೇಸು ಹಾಕಿದಿರಲ್ಲ. ಅದು ನಿಜವಾದ ಅಗ್ನಿ ಪರೀಕ್ಷೆಯಾಗಿತ್ತೆ?

ಉ:- ಹೌದು ಬಹಳ ವಿಧಗಳಲ್ಲಿ ಹಿಂಸೆ ಎದುರಿಸಬೇಕಾಯಿತು. ನ್ಯಾಯಾಲಯದಲ್ಲಿ ವಕೀಲರು ಯಾವ ರೀತಿಯ ಪ್ರಶ್ನೆ ಕೇಳುತ್ತಾರೆಂಬುದೇ ಮಹಾ ಸಮಸ್ಯೆಯಾಗಿತ್ತು. ಆದರೆ ಇದರಿಂದ ನಾನು ಬಹಳಷ್ಟು ಕಲಿತೆ.

ಪ್ರ:- ಯಾವುದೇ ಮಹಿಳಾ ಸಂಘಟನೆಗಳಾಗಲೀ ವಕೀಲರುಗಳಾಗಲೀ ಯಾಕೆ ನಿಮ್ಮನ್ನು ಬೆಂಬಲಿಸಲಿಲ್ಲ?

ಉ:- ನಾನು ಒಬ್ಬ ಬಡ ಹಳ್ಳಿ ಹೆಂಗಸಿನಂತೆ ಈ ಪ್ರಕರಣವನ್ನು ಎದುರಿಸಬಯಸಿದೆ. ಹಣ ಕೊಟ್ಟು ವಕೀಲರನ್ನು ಇಟ್ಟುಕೊಳ್ಳಲು ಇಚ್ಛಿಸಲಿಲ್ಲ. ಸರ್ಕಾರಿ ವಕೀಲರು ಕೇಸನ್ನು ಯಾವ ರೀತಿ ನಿರ್ವಹಿಸುತ್ತಾರೆಂದು ನೋಡ ಬಯಸಿದ್ದೆ. ಪ್ರತಿಯೊಂದು ಸವಾಲುಗಳಿಗೂ ಉತ್ತರದನ್ನು ವಕೀಲರು ನನಗೆ ಹೇಳಿ ಕೊಡಬೇಕಾದ ಅಗತ್ಯ ನನಗಿರಲಿಲ್ಲ.

ಪ್ರ:- ಮಹಿಳಾ ಸಂಘಟನೆಗಳು ನಿಮ್ಮ ಸಹಾಯಕ್ಕೆ ಬರಲಿಲ್ಲವೆ?

ಉ:- ಅವರೆಲ್ಲ ಸಹಾಯಕ್ಕೆ ಬಂದರು. ಬಂದವರು ಪ್ರಚಾರದ ಅಬ್ಬರ ಮುಗಿದ ನಂತರ ಹಿಂದೆ ಸರಿದರು. ಇಬ್ಬರು ಮಹಿಳಾ ವಕೀಲರು ಇಂದಿರಾ ಜೈಸಿಂಗ್ ಮತ್ತು ರಾಣಿ ಜೇತ್ಮಲಾನಿ ಸಹಾಯಕ್ಕೆ ಬರುವುದಾಗಿ ಹೇಳಿದರು. ಆದರೆ ಅಷ್ಟರಲ್ಲಿ ನನಗೆ ಏಕಾಂಗಿಯಾಗಿ ಇದನ್ನು ಎದುರಿಸಬಲ್ಲೆನೆಂಬ ಆತ್ಮವಿಶ್ವಾಸ ಮೂಡಿತ್ತು.

ಪ್ರ:- ಈ ವಿಚಾರಣೆಗೆ ಯಾಕೆ ಇಷ್ಟೊಂದು ವೇಳೆ ತಗುಲಿತು?

ಉ:- ಹಿಯರಿಂಗು ಪದೇ-ಪದೇ ಮುಂದೆ ಹಾಕಲ್ಪಡುತ್ತಿತ್ತು. ಏಪ್ರಿಲ್ ೯೦ ರಿಂದ ಇಂದಿನವರೆಗೆ ೧೩ ಸಲ ನಾನು ಕೋರ್ಟಿಗೆ ಹಾಜರಾದೆ. ಪ್ರತಿ ಸಲ ಅಲ್ಮೋರಾದಿಂದ ದಿಲ್ಲಿಗೆ ಬಂದು ಹೋಗಲು ೫೦೦ | ರೂ ವೆಚ್ಚವಾಗುತ್ತಿದ್ದವು.

ಪ್ರ:- ಇಂತಹುದೇ ಸನ್ನಿವೇಶವನ್ನು ಎದುರಿಸುತ್ತಿ

ರುವ ಮಹಿಳೆಯರಿಗೆ ನಿಮ್ಮ ಸಲಹೆ?

ಉ:- ಮಹಿಳಾ ಸಂಘಟನೆಗಳು ಕೇಸನ್ನು ಕೈಗೆತ್ತಿಕೊಂಡರೆ ಅರ್ಧದಲ್ಲಿ ಕೈ ಬಿಡಬಾರದು. ಇನ್ನೊಂದು ವಿಷಯವೇನೆಂದರೆ, ಒಬ್ಬ ಕ್ಯಾಬಿನೆಟ್ ಮಂತ್ರಿಯನ್ನು ಕೋರ್ಟಿಗೆಳೆಯುವದು ಜನ ಅಂದುಕೊಂಡಷ್ಟು ಕಷ್ಟಸಾಧ್ಯವೇನೂ ಅಲ್ಲ. ಕೋರ್ಟಿಗೆ ಹೋದರೆ ನಿನ್ನ ಕತೆ ಮುಗಿದಂತೆಯೇ ಎಂದು ಎಲ್ಲರೂ ನನ್ನ ಹೆದರಿಸಿದ್ದರು. ಆದರೆ ಹಾಗೇನೂ ಆಗಲಿಲ್ಲ. ಕಿರುಕುಳಕ್ಕೊಳಗಾದ ಹೆಂಗಸು ಹಿಂಜರಿಯದೆ ತಪ್ಪಿತಸ್ಥರನ್ನು ನ್ಯಾಯಾಲಯಕ್ಕೆಳೆಯಬೇಕು. ಆತ ಬೇಕಾದಷ್ಟು ದೊಡ್ಡವನಾಗಿದ್ದರೂ. ಇಂತಹ ನೂರಾರು ಅನ್ಸಾರಿಗಳು ಅಧಿಕಾರ ಮದದಿಂದ ತಾವು ಏನು ಮಾಡಿದರೂ ಸರಿ ಎಂದು ನಂಬಿಕೊಳ್ಳುತ್ತಾರೆ. ಅವರ ನಂಬಿಕೆಗಳನ್ನು ಹುಸಿಗೊಳಿಸುವದು ತೀರಾ ಅಸಾಧ್ಯದ ಕೆಲಸವೇನೂ ಅಲ್ಲ. ಇನ್ನೊಂದು ವಿಷಯವೆಂದರೆ ಅತ್ಯಾಚಾರ-ಆಕ್ರಮಣ-ವರದಕ್ಷಿಣೆ ಮುಂತಾದ ಮಹಿಳಾ ಕೇಸುಗಳ ವಿಚಾರಣೆಗೆ ಮಹಿಳೆಯರಿಂದಲೇ ನಡೆಸಲ್ಪಡುವ ವಿಶೇಷ ಕೋರ್ಟುಗಳಿರಬೇಕು ಎಂದು ನನ್ನ ಅಭಿಪ್ರಾಯ. ಇಂತಹ ಕೇಸುಗಳ ತೀರ್ಪು ಆದಷ್ಟು ಬೇಗ ಬರಬೇಕು. ವಕೀಲರನ್ನು ಹುಡುಕಿಕೊಂಡು ಅಲೆದಾಡುವ ಸಮಸ್ಯೆ ಸ್ತ್ರೀಯರಿಗಿರಬಾರದು.

ಪ್ರ:- ನೀವು ಕೆಲಸ ಮಾಡುತ್ತಿರುವ ಗ್ರಾಮಗಳಲ್ಲಿ ಈ ಕೇಸಿನ ಬಗ್ಗೆ ಯಾವ ರೀತಿಯ ಪ್ರತಿಕ್ರಿಯೆ ಕಂಡು ಬಂದಿತ್ತು?

ಉ:- ಅಲ್ಮೋರಾದಲ್ಲಿ ಜನರು ನನ್ನನ್ನ ಬೆಂಬಲಿಸಿದರು. ಒಬ್ಬ ಮಂತ್ರಿಯನ್ನು ಕೋರ್ಟಿಗೆಳೆದ ನನ್ನ ಧೈರ್ಯಕ್ಕಾಗಿ ಅವರೆಲ್ಲ ಹೆಮ್ಮೆ ಪಟ್ಟುಕೊಂಡರು.

ಪ್ರ:- ಭಗವಂತ್‌ಸಿಂಗ್‌ರವರ ಪ್ರತಿಕ್ರಿಯೆ ಹೇಗಿತ್ತು?

ಉ:- ಅವರು ಆ ದಿನಗಳಲ್ಲಿ ಗಡಿ ಪ್ರದೇಶಗಳಲ್ಲಿದ್ದರು. ವರ್ತಮಾನ ಪತ್ರಿಕೆಗಳಿಂದ ಸುದ್ದಿ ಗೊತ್ತಾದಾಗ ಬಂದು ಯಾವುದೇ ಸಹಾಯ ಬೇಕಿದ್ದರೂ ಮಾಡುತ್ತೇನೆ ಎಂದರು.

ಪ್ರ:- ಯಾರಾದರೂ ನಿಮ್ಮ ನಡತೆಯ ಬಗ್ಗೆ ಆರೋಪ ಮಾಡಿದರೆ?

ಉ:- ಅನ್ಸಾರಿಯವರಲ್ಲಿ ಹೇಳಿರಬಹುದು, ನನ್ನೆದುರಿಗೆ ಯಾರೂ ಏನೂ ಹೇಳಿಲ್ಲ. ಹಿಂದಿನಿಂದ ಯಾರೇನೇ ಹೇಳಿದರೂ ನಾನದನ್ನು ಕೇರ್ ಮಾಡುವವಳಲ್ಲ.

ಪ್ರ:- ನೀವು ಅನ್ಸಾರಿಯವರಲ್ಲಿ ಮರದ ದಿಮ್ಮಿಗಳ ಕಳ್ಳ ಸಾಗಾಣಿಕೆ ಹಾಗೂ ಕಳ್ಳತನಗಳ ಬಗ್ಗೆ ದೂರು ಕೊಡಲು ಹೋಗಿದ್ದಿರಿ. ಈಗ ಅಲ್ಮೋರಾ ಹಾಗೂ ಸುತ್ತಮುತ್ತಲಿನ ಪರಿಸ್ಥಿತಿ ಹೇಗಿದೆ?

ಉ:- ಬಿನ್ಸಾರ್ ಅರಣ್ಯದಲ್ಲಿ ಇಂಥ ಘಟನೆಗಳು ಸಂಪೂರ್ಣ ನಿಂತಿವೆ. ಆದರೆ ಕುಮಾಂವ್ ಪ್ರದೇಶದಲ್ಲಿ ಪರಿಸ್ಥಿತಿ ಹಾಗೇ ಇದೆ. ಯಾವ ಸರಕಾರ ಬಂದರೂ ಏನೂ ಪ್ರಯೋಜನ ವಾಗಿಲ್ಲ.

ನಾನೀಗ ಪರಿಸರ ಚಳವಳಿಗಿಂತ ಹೆಚ್ಚಾಗಿ ಅಂಗವಿಕಲರ, ಕುಷ್ಠರೋಗಿಗಳ ಪುನರ್ವಸತಿ ಕೆಲಸ ಮಾಡುತ್ತಿದ್ದೇನೆ. "ಜನ ಜಾಗರಣ ಸಮಿತಿ" ಯಲ್ಲಿ (ಮುಕ್ತಿದತ್ತಾ ಇದರ ಸೆಕ್ರೇಟರಿ) ಈಗ ಬೇರೆ-ಬೇರೆ ವಿಭಾಗಗಳಾಗಿವೆ. ಸಾಮಾನ್ಯವಾಗಿ ಕುಷ್ಠ ರೋಗದಿಂದ ಗುಣ ಹೊಂದಿದವರು ಬಹಳ ಜನ ಭಿಕ್ಷೆ ಬೇಡುತ್ತಾರೆ. ಇದನ್ನು ತಡೆಗಟ್ಟಲು ನಾನವರಿಗೆ ಎಂಟು ಕೈ ಮಗ್ಗಗಳನ್ನು, ಹದಿನೆಂಟು ಚರಕಗಳನ್ನು ಒದಗಿಸಿದ್ದೇನೆ, ನಲವತ್ತೈದು ಜನ ಅವುಗಳ ಪ್ರಯೋಜನ ಪಡೆಯುತ್ತಿದ್ದಾರೆ. ಪಿತೋರ್‌ಘಡದಲ್ಲಿ ಇವರಿಗಾಗಿ ನೈಸರ್ಗಿಕ ಬಣ್ಣ ಬಳಸಿ ಉಣ್ಣೆ ಹಾಸುಗಳನ್ನು ತಯಾರಿಸುವ ಉದ್ಯಮವನ್ನು ಪುನರ್ ಸ್ಥಾಪಿಸಲು ಯತ್ನಿಸುತ್ತಿದ್ದೇನೆ. ಅಲ್ಮೋರಾ ಪಿತೋರ್‌ಘರ ನಡುವೆ ಇಪ್ಪತ್ನಾಲ್ಕು ಹಾಸಿಗೆಗಳ ಆಸ್ಪತ್ರೆ ತೆರೆಯುವ ಪ್ರಯತ್ನವನ್ನೂ ನಡೆಸಿದ್ದೇನೆ.

ಅನ್ಸಾರಿ ಪ್ರಕರಣದ ನಂತರ ನಮ್ಮ ಮಹಿಳೆಯರಲ್ಲಿ ಸಾಮರ್ಥ್ಯ ಮತ್ತು ಆತ್ಮ ವಿಶ್ವಾಸವನ್ನು ತುಂಬಬೇಕೆಂಬ ಆಕಾಂಕ್ಷೆ ನನ್ನಲ್ಲಿ ಪ್ರಬಲಗೊಳ್ಳುತ್ತಿದೆ. ನಾನು ಮಹಿಳಾ ಮಂಡಳಗಳೊಂದಿಗೆ ಆತ್ಮೀಯ ಸಂಪರ್ಕವಿಟ್ಟುಕೊಂಡು, ಅವರಿಗೆ ಕಾನೂನು ಸಲಹೆ ನೀಡಿ

ಅವರನ್ನು ನಾಗರಿಕ ಅರಣ್ಯದ ಅನ್ಯಾಗಳೊಂದಿಗಿನ ಹೋರಾಟಕ್ಕೆ ಸಿದ್ಧಗೊಳಿಸುತ್ತಿದ್ದೇನೆ,

ಪ್ರ:- ಈಗ ಜನರು ನಿಮ್ಮನ್ನು ಹೇಗೆ ಕಾಣುತ್ತಿದ್ದಾರೆ?

ಉ: ಸರಕಾರಿ ಇಲಾಖೆಗಳು ನನ್ನನ್ನು ಗಂಭೀರವಾಗಿ ಪರಿಗಣಿಸುತ್ತಿದ್ದಾರೆ. ಇನ್ನು ಮುಂದೆ ಯಾರೂ ನನ್ನ ಮೇಲೆ ಆಕ್ರಮಣ ಮಾಡುವ ಧೈರ್ಯ ಮಾಡಲಾರರೆಂಬ ಭರವಸೆ ನನಗೆ ಬಂದಿದೆ,

ಸಂಗ್ರಹಾನುವಾದ:- ಉಷಾ ಹೆಗಡೆ

(ಕೃಪೆ- ಇಂಡಿಯನ್ ಎಕ್ಸ್‌ಪ್ರೆಸ್)

---

## ಒಂದು ಮಾನವ ನಿರ್ಮಿತ ನರಕ

ಸಂಧ್ಯಾ ಕಾರ್ನಾಡ.

೧) ಸುಶೀಲಾ ರಾಜಕುಮಾರ್- ಒಬ್ಬ ವಿಜ್ಞಾನ ಪದವೀಧರೆ. ಒಬ್ಬ ಎಲ್. ಐ. ಸಿ. ಮ್ಯಾನೇಜರರ ಪತ್ನಿ ಒಂದೂವರೆ ವರ್ಷದ ವಿಮೋಚನಾಳ ತಾಯಿ. ಅಂತರಾಷ್ಟ್ರೀಯ ಮಹಿಳಾ ದಿನವಾದ ಮಾರ್ಚ್ ೮ ರಂದು (೯೨ರ) ನೇಣು ಹಾಕಿಕೊಂಡಳು,

೨) ಜಯಂತಿ ಕಿತ್ತೂರ- ಡ್ರೈವರರೊಬ್ಬರ ಮಗಳು, (೨೦ ವ) ರೇಲ್ವೆ ನೌಕರರೊಬ್ಬರ ಹೆಂಡತಿ, ಬಡಹಗಾರ್ತಿ, ಆದರ್ಶಗೃಹಿಣಿ, ಫೆ. ೭-೯೨ ರಂದು ಹುಬ್ಬಳ್ಳಿಯಲ್ಲಿ ಸ್ಟೌ.ಸಿಡಿತದಿಂದ ಸತ್ತಳು.

೩) ಅಂಬಿಕಾ- ವಿಧವೆಯೊಬ್ಬಳ ಮಗಳು, ಆರು ತಿಂಗಳ ಹಿಂದೆ ಮಗುವಿನೊಂದಿಗೆ ಗಂಡನ ಮನೆ ಬಿಟ್ಟು ಹೊರ ಬಂದಳು.

ಸುಶೀಲಾ- ಜಯಂತಿ, ಅಂಬಿಕಾರ ಹಿನ್ನೆಲೆ ವರ್ಗಗಳು ಬೇರೆ ಬೇರೆಯಾದರೂ ಒಂದಂಶದಲ್ಲಿ ಮೂವರೂ ಸಮಾನ ದುಃಖಿಗಳು ವರದಕ್ಷಿಣೆ ಎಂಬ ಕರಾಳ ಆಕ್ಟೋಪಸ್ಸಿನ ಹಿಡಿತದಲ್ಲಿ ಸಿಕ್ಕಿ ನರಳಿದವರು,

ಸುಶೀಲಾಳ ಅತ್ತೆ ಮನೆಯವರು ಅವಳ ಮದುವೆಯಾದಂದಿನಿಂದಲೂ ಹೆಚ್ಚಿನ ವರದಕ್ಷಿಣೆಗಾಗಿ ಹಿಂಸಿಸುತ್ತಿದ್ದರು. ಹಾಗೆ ಸಾಕಷ್ಟು ನಗದು ಒಡವೆಗಳನ್ನು ಕೊಟ್ಟೇ ಅವಳನ್ನು ಮದುವೆ ಮಾಡಿದ್ದರು, ಆದರೆ ಅಡವರಿಗೆ ತೃಪ್ತಿ ತಂದಿರಲಿಲ್ಲ. ಒಂದು ಭಾನುವಾರ ಸುಶೀಲಾಳ ತಂದೆ ಕೆ, ಪಿ. ಷಣ್ಮುಗವೇಲು ತಮ್ಮ ಪತ್ನಿಯೊಂದಿಗೆ ಗರ್ಭಿಣಿ ಮಗಳನ್ನು ಸೀಮಂತಕ್ಕಾಗಿ ಕರೆತರಲು ಅವಳ ಗಂಡನ ಮನೆಗೆ ಹೋದರು. ಆದರೆ ಅವಳ ಅತ್ತೆ ಮಾವ ಸೊಸೆಯನ್ನು ತವರಿಗೆ ಕಳಿಸಲು ಒಪ್ಪಲಿಲ್ಲ, ಸೊಸೆಯ ಅಗಲಿಕೆಯ ಕಾರಣಕ್ಕಾಗಿ ಅಲ್ಲ ಅವಳು ತವರಿನಿಂದ ಟಿ, ವಿ. ಮತ್ತು ಫ್ರಿಜ್ಜುಗಳನ್ನು ತರಲಿಲ್ಲ ಎಂಬ ಸಿಟ್ಟಿನಿಂದ.

ಸಂಜೆ ಎಂಟೂವರೆಗೆ ಷಣ್ಮುಗವೇಲು ಇನ್ನೊಂದು ದಿನ ಬಂದು ನಿನ್ನ ಕರೆದೊಯ್ಯುವೆವೆಂದು ಮಗಳ ಮನವೊಲಿಸಿ ಕೋರಮಂಗಲದಲ್ಲಿರುವ ತಮ್ಮ ಮನೆಗೆ ವಾಪಸು ಬಂದರು. ಬೀಗರ ಮನೆಯಲ್ಲಿ ನಡೆದ ವರದಕ್ಷಿಣೆ ಜಗಳ ಇನ್ನಿಲ್ಲದಂತೆ ಅವರನ್ನು ಕಾಡುತ್ತಲೆ ಇತ್ತು. ಆ ಒತ್ತಡವನ್ನು ತಾಳಲಾರದೆ ರಾತ್ರಿ ೯-೩೦ಕ್ಕೆ ಮಗಳಿಗೆ ಫೋನ್ ಮಾಡಿದರು, ಆದರೆ ಫೋನಿನಲ್ಲಿ ಮೂರು ದನಿಗಳು ಮೂರು ರೀತಿ ಹೇಳಿಕೆ ಕೊಟ್ಟವು, ಕೊನೆಗೊಂದು ದನಿ ಆಕೆ ನೇಣು ಹಾಕಿಕೊಂಡಿದ್ದಾಳೆ ಎಂದಿತು,

ಆ ಕೂಡಲೇ ಅವರು ಮಗಳ ಮನೆಗೆ ಹೋಗಿ ನೋಡಿದರೆ ಅಲ್ಲಿ ಯಾರೂ ಇರಲಿಲ್ಲ, ಜ, ಜ,

ಹಾಸ್ಪಿಟಲ್ ಎದುರು ಬೀಗರ ಕಾರು ನೋಡಿ ಒಳಗೆ ಹೋದಾಗ ಅಲ್ಲಿ ಮಗಳು ಈ ಲೋಕ ವ್ಯಾಪಾರಕ್ಕೆಲ್ಲ ಅತೀತಳಾಗಿ ಮಲಗಿದ್ದಳು. ಸುತ್ತಮುತ್ತ ಗಂಡನ ಮನೆಯವರು ಏನೂ ಆಗದವರಂತೆ ಕುಳಿತಿದ್ದರು.

"ಆ ಹೊತ್ತು ಜಗಳಾಡಿಯಾದರೂ ಮಗಳನ್ನು ಕರೆ ತಂದಿದ್ದರೆ ಅವಳು ಬದುಕುತ್ತಿದ್ದಳೇನೊ......." ಎಂದು ಮಗಳ ಮದುವೆಯ ಫೋಟೋ ತೋರಿಸುತ್ತಾ ತಂದೆ ನಿಟ್ಟುಸಿರಿಟ್ಟರು.

ಅಲ್ಲಿ ಸುಶೀಲಾ ಒಳ್ಳೇ ಕೆಂಪು ಕೆಂಪಾಗಿ ನಗುತ್ತಿದ್ದಳು. ಅವಳ ಕಣ್ಣಲ್ಲಿ ಕನಸುಗಳು ಕುಣಿಯುತ್ತಿದ್ದವು. ಆದರೆ ಅದೆಲ್ಲ ಕೇವಲ ನಾಲ್ಕೇ ವರ್ಷದ ಭಾಗ್ಯವೆಂದು ಯಾರೂ ಕನಸಿನಲ್ಲೂ ಕಂಡಿರಲಿಲ್ಲ. ಇಂದಿರಾ ನಗರದ ಭವ್ಯ ಬಂಗಲೆಯಲ್ಲಿ ಐದು ತಿಂಗಳ ಗರ್ಭಿಣಿ–ಒಂದು ಮಗುವಿನ ತಾಯಿ ಸುಶೀಲಾಳಿಗೆ ಮನೆಯೇ ಮಸಣವಾಯಿತು.

ಜಯಂತಿ ಕಿತ್ತೂರ– ಒಬ್ಬ ಅಸಾಧಾರಣ ಪ್ರತಿಭೆಯುಳ್ಳ ಕವಯಿತ್ರಿ ಈ ಜಗತ್ತನ್ನೇ ಗೆಲ್ಲಬಹುದಾದ ಆತ್ಮವಿಶ್ವಾಸ ಹೊಂದಿದವಳು. ಆದರೆ ಮದುವೆಯಾದ ಒಂದೇ ವರ್ಷದಲ್ಲಿ ಸೋತು ಮರಣಕ್ಕೆ ಶರಣಾದಳು.

ಜಯಂತಿ ತನ್ನ ಗಂಡನ ಅದೆಷ್ಟೊ ತಪ್ಪುಗಳನ್ನು, ತೌರಿನಿಂದ ರೂ ೧೦೦೦೦ ತೆಗೆದುಕೊಂಡು ಬಾ ಎಂದು ಆತ ದಿನ ನಿತ್ಯ ಕೊಡುತ್ತಿದ್ದ ಹಿಂಸೆಗಳನ್ನು ತನ್ನ ತಂದೆ ತಾಯಿಯರೊಂದಿಗೂ ಹೇಳಿರಲಿಲ್ಲ. ತನ್ನಷ್ಟಕ್ಕೆ ತಾನು ಅದೃಷ್ಟವನ್ನು ಹಳಿದುಕೊಳ್ಳುತ್ತ ಪ್ರತಿ ನಿತ್ಯ ಸಾವಿರ ಸಾವುಗಳನ್ನು ಸಾಯುತ್ತಿದ್ದಳು. ಅವಳ ಮೂಕ ಯಾತನೆಗೆ ಸಾಕ್ಷಿ ಅವಳ ಡೈರಿ ಮಾತ್ರ. ಅಲ್ಲಿ ಸಿಕ್ಕ ಕೆಲವು ಮಾತುಗಳಿವು—

"ನನ್ನ ಮದುವೆ ನಿಶ್ಚಯವಾದಾಗ ನಾನಿನ್ನೂ ಚಿಕ್ಕವಳಾಗಿದ್ದೆ. ವಿದ್ಯಾರ್ಥಿ ಜೀವನ ಮತ್ತು ಮದುವೆಯ ನಡುವಿನ ವ್ಯತ್ಯಾಸ ಗೊತ್ತಿರಲಿಲ್ಲ. ವೈವಾಹಿಕ ಬದುಕು ಹೂವಿನ ಹಾಸಿಗೆಯೆಂದೆಣಿಸಿದ್ದೆ. ಮುಳ್ಳಿನ ಹಾದಿಯೆಂದು ಗೊತ್ತಿರಲಿಲ್ಲ. ತಾಯಿ ಚಾಮುಂಡಿ, ನನಗೆ ಧೈರ್ಯ ಕೊಡು ಅಮ್ಮಾ——"

"ಹುಡುಗಿಯರು ಮದುವೆಯಾಗಲೇ ಬಾರದು ಏಕೆಂದರೆ– ಮದುವೆಯಾದ ಕೂಡಲೇ ಹುಡುಗಿ ತನ್ನ ಜೀವನವನ್ನೇ ತ್ಯಜಿಸಲು ತಯಾರಿರಬೇಕಾಗುತ್ತದೆ.— ಅವಳ ಗಂಡ ಒಳ್ಳೆಯವನಿದ್ದರೆ–ಯಾವುದೇ ದುಶ್ಚಟಗಳಿಲ್ಲದಿದ್ದರೆ ಅವಳ ಜೀವನ ಸುಗಮವಾಗಿ ಸಾಗುವ ಸಂಭವನೀಯತೆ ಶೇಕಡಾ ಐವತ್ತರಷ್ಟು–ಆದರೆ ಗಂಡ ಎಂಥವನೇ ಆಗಿದ್ದರೂ ಹುಡುಗಿ ಮನೆಯಿಂದಾಚೆ ಹೊರಟರೆ ಈ ಸಮಾಜ ಗಂಡನ ತಪ್ಪು ಪರಿಗಣಿಸದೆ ಅವಳ ಮೇಲೆ ಗೂಬೆ ಕೂರಿಸುತ್ತದೆ. ಇಂಥ ಸಂದರ್ಭದಲ್ಲಿ ಹುಡುಗಿಯರು ಧೈರ್ಯಗೆಡದೆ ಆತ್ಮಹತ್ಯೆಯ ಪ್ರಯತ್ನಕ್ಕಿಳಿಯದೆ, ಬದುಕನ್ನೆದುರಿಸಬೇಕೆಂಬುದು ನನ್ನ ಅಪೇಕ್ಷೆ"....

ಜಯಂತಿಯ ತಂದೆ ಬಿ. ಎನ್. ಚಂದ್ರಪ್ರಕಾಶ ಬೆಂಗಳೂರಿನಲ್ಲಿ ಡ್ರೈವರಾಗಿದ್ದಾರೆ. ಅವರು ತಮ್ಮ ಮಗಳನ್ನು ಹುಬ್ಬಳಿಯಲ್ಲಿ ರೈಲ್ವ ಮಶಿನಿಸ್ಟ ಆದ ಮದನ್ ಹನುಮಂತ್ರಾವ ಕಿತ್ತೂರ ಎಂಬುವವರಿಗೆ ಕೊಟ್ಟು ಮದುವೆ ಮಾಡಿದ್ದರು. ಆದಾಗಿ ಒಂದು ವರ್ಷ ತುಂಬಲು ಹತ್ತು ದಿನವಿರುವಾಗ ಫೋನ್ ಕರೆಯೊಂದು ಮಗಳ ಸಾವಿನ ಸುದ್ದಿಯನ್ನು ತಂದೆಗೆ ತಲುಪಿಸಿತು.

"ಹೆಣ್ಣಿನ ಬದುಕಿಗೆ ಮದುವೆಯೇ ಏಕೈಕ ಗುರಿ ಎಂದು ಈ ಸಮಾಜ ನಂಬಿಕೊಂಡಿರುವ ತನಕ–ಅದಕ್ಕಿಂತ ಮುಖ್ಯವಾಗಿ ಹೆಣ್ಣು ತನಗೆ ಬೇರೊಂದು ಆಯ್ಕೆಯಿದೆ. ಮತ್ತು ಆಯ್ಕೆಯ ನಿರ್ಧಾರ ತನ್ನ ಕೈಯಲ್ಲೇ ಇದೆ ಎಂದು ಅರಿತುಕೊಳ್ಳುವ ತನಕ ಯಾವ ಕೋರ್ಟೂ ಇಂತಹ ಅಮಾನುಷ ಪ್ರಸಂಗವನ್ನು ತಪ್ಪಿಸಲಾರದು." ಎನ್ನುವ ಸಾಮಾಜಿಕ ಕಾರ್ಯಕರ್ತೆ ವಧು ಗಾಯತ್ರಿಯಾ ಕತೆಯನ್ನು ವಿವರಿಸುತ್ತಾರೆ.

ಗಾಯತ್ರಿ ಒಬ್ಬ ಪೋಲೀಸ್ ಕಾನ್ಸಟೇಬಲ್‌ರ ಪತ್ನಿ, ಗಂಡ ಕೇಳಿದಷ್ಟು ಹಣ ಮತ್ತು ಬಂಗಾರವನ್ನು ಅವಳು ತೌರಿನಿಂದ ತರಲಿಲ್ಲ ಎಂಬ ಕಾರಣಕ್ಕಾಗಿ ಏಪ್ರಿಲ್ ೧೨, ೧೯೯೧ ರಂದು ಸುಟ್ಟುಕೊಂಡು ಸತ್ತಳು.

ಅವಳ ತಂಗಿ ಅಂಬಿಕಾ ಕೂಡ ಇದೇ ರೀತಿ ಹಿಂಸೆ ಅನುಭವಿಸುತ್ತಿದ್ದಳು. ಆದರೆ ಗಾಯತ್ರಿಯ

ಸಾವು ಅಂಬಿಕಾಳನ್ನು ಎಚ್ಚರಿಸಿತು. ಅವಳು ಹೆರಿಗೆ ಆಸ್ಪತ್ರೆಯಲ್ಲಿದ್ದಾಗ ಗಂಡ ಬಂದು ಬರ್ಬರವಾಗಿ ಹೊಡೆದಾಗ ಅವಳು ತವರು ಮನೆಗೆ ಬಂದುಬಿಟ್ಟಳು. ಅವರ ತಾಯಿ ರತ್ನಮ್ಮ ಗಾಯತ್ರಿಗೆ ಆಶ್ರಯ ನಿರಾಕರಿಸಿ ಆದ ಅನಾಹುತಕ್ಕೆ ಹೆದರಿ ಅಂಬಿಕಾಳನ್ನು ಮನೆಯಲ್ಲಿರಿಸಿಕೊಂಡು ಅಭಯ ನೀಡಿದ್ದಾರೆ. ಗಂಡನ ಮನೆಯ ನರಕದಿಂದ ಹೊರ ಬಂದ ಅಂಬಿಕಾ ಈಗ ಧೈರ್ಯ-ಸ್ವಾಭಿಮಾನ ಜೀವನ ಪ್ರೀತಿಗಳನ್ನು ಮೈಗೂಡಿಸಿಕೊಂಡ ಹೊಸ ವ್ಯಕ್ತಿಯಾಗಿದ್ದಾಳೆ.

ಹೀಗೆ ಹೇಳ ಹೊರಟರೆ ಹೇಳಲ್ಪಡುವ ದುರಂತ ಕಥೆಗಳ ಸಾವಿರಪಟ್ಟು ಹೇಳಲಾರದ ವ್ಯಥೆಗಳಿರುತ್ತವೆ. ಆದರೆ ಕೇಳುವ ಕಿವಿಗಳಿರಬೇಕಷ್ಟೆ.

ಇಂಥ ವರದಕ್ಷಿಣೆ ದುರಂತಗಳು ಸಾಂಸಾರಿಕ ನಾಟಕದ ಎಲ್ಲ ನಾಟಕೀಯ ಅಂಶಗಳನ್ನೂ ಒಳಗೊಂಡಿರುತ್ತವೆ. ಮದುವೆ-ಪ್ರಣಯ-ಕೊನೆಯಲ್ಲಿ ದುರಂತ ಹೀಗೆ. ಆದರ ದುರ್ದೈವದ ಮಾತೆಂದರೆ ಈ ನಾಟಕಕ್ಕೆ ಪ್ರೇಕ್ಷಕರಿಲ್ಲದಿರುವದು. ಅದು ಹೋಗಲಿ, ದುರಂತ ನಾಯಕಿಯ ಪ್ರಾಣಾಂತಿಕ ಆಕ್ರಂದನ ಕೂಡ ಹೊರ ಬೀಳದಷ್ಟು, ಭದ್ರ ವ್ಯವಸ್ಥೆಯಿರುವುದು ಇನ್ನೊಂದು ವಿಪರ್ಯಾಸ. ಅದೇನೇ ಇದ್ದರೂ ಈ ರುದ್ರ ನಾಟಕದಲ್ಲಿ ನಾಯಕಿಯ ಸಾವಂತೂ ಕಟ್ಟಿಟ್ಟಬುತ್ತಿ.

ಕರ್ನಾಟಕದಲ್ಲಿ ಪ್ರತಿ ವರ್ಷ ೧೫೦ ರಿಂದ ೨೦೦ ರವರೆಗೆ ವರದಕ್ಷಿಣೆ ಸಾವಿನ ಕೇಸುಗಳು ದಾಖಲಾಗುತ್ತವೆ. ಈ ಸಂಖ್ಯೆ ವರ್ಷದಿಂದ ವರ್ಷಕ್ಕೆ ಏರುತ್ತಿದೆಯೇ ಹೊರತೂ ಇಳಿಯುವ ಸೂಚನೆಯಿಲ್ಲ. "ಜನರಲ್ಲಿ ಜಾಗೃತಿಯುಂಟಾಗಿರುವದರಿಂದ ಇಂಥ ಅನ್ಯಾಯಗಳನ್ನು ಜನರು ಪೋಲಿಸರಿಗೆ ವರದಿ ಮಾಡುತ್ತಿರುವುದರಿಂದಾಗಿ ಈ ಏರಿಕೆ" ಎಂದು ಪೋಲಿಸ್ ಸುಪರಿಂಟೆಂಡೆಂಟ್ ರ ಹೇಳಿಕೆ. ಆದರೆ ಮಹಿಳಾ ಸಂಘಟನೆಗಳ ಪ್ರಕಾರ- "ಇಂದಿನ ಜನರ ಕೋರಿಕೆಗೆ ಕೊನೆಯೇ ಇಲ್ಲದಿರುವದರಿಂದ ಹೆಂಡಿರ ಮುಖಾಂತರ ತಮ್ಮ ಭೋಗಾಭಿಲಾಷೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುವುದರಿಂದ ಈ ಸಮಸ್ಯೆಯ ನಿವಾರಣೆ ಸುಲಭವಲ್ಲ."

ಇಲ್ಲಿ ಇನ್ನೊಂದು ಕುತೂಹಲದ ಅಂಶವೆಂದರೆ ಇಂಥ ಪ್ರಕರಣಗಳಲ್ಲಿ ಸಿಲುಕಿರುವ ಸ್ತ್ರೀಯರಲ್ಲಿ ಬಹುತೇಕ ಹೆಣ್ಣುಗಳು ವಿದ್ಯಾವಂತರೂ ಉದ್ಯೋಗಸ್ಥರೂ ಆಗಿರುವದು. ಈ ಅಂಶ ಸಮಸ್ಯೆಯ ಜಟಿಲತೆಯನ್ನು ಎತ್ತಿ ತೋರಿಸುವದಾಗಿದೆ.

ನಮ್ಮ ರಾಜ್ಯದಲ್ಲಿ ಜನ ಸಾಮಾನ್ಯರ ಮತ್ತು ಸಾಮಾಜಿಕ ಸಂಸ್ಥೆಗಳ ಒತ್ತಾಯದಿಂದ ಸಿ ಓ ಡಿ ಯಲ್ಲಿ ಅನ್‌ಟಿ ಡ್ವರಿ ಸೆಲ್ ಎಂಬ ವಿಭಾಗವೂ ಇಂಥ ಪ್ರಕರಣಗಳ ವಿಚಾರಣೆಗಾಗಿ ವಿಶೇಷ ನ್ಯಾಯಾಲಯವೂ ೧೯೮೩ ರಲ್ಲಿ ಬೆಂಗಳೂರಿನಲ್ಲಿ ಅಸ್ತಿತ್ವಕ್ಕೆ ಬಂದವು.

ಅಂದಿನಿಂದ ಇಂದಿನವರೆಗೆ ಬಂದ ೪೭೯ ಕೇಸುಗಳಲ್ಲಿ ೩೬೧ ಕೇಸುಗಳು ವಿಚಾರಣೆ ಮುಗಿಯದೆ ಪೆಂಡಿಂಗ್ ಇವೆ. ೨೬ ಕೇಸುಗಳ ವಿಚಾರಣೆ ನಡೆಯುತ್ತಿದೆ. ಕೇವಲ ೧೪ ರಲ್ಲಿ ಮಾತ್ರ ಅಪರಾಧವನ್ನು ಸಾಬೀತುಗೊಳಿಸಲಾಗಿದೆ.

ಈಗಿನ ಕಾನೂನಿನಂತೆ ಮದುವೆಯಾದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ, ಅತ್ತೆ ಮನೆಯಲ್ಲಿ ಅವಳನ್ನು ವರದಕ್ಷಿಣೆಗಾಗಿ ಪೀಡಿಸಿದ್ದು ಸಾಬೀತಾದರೆ, ಗಂಡ ಅಥವಾ ಅತ್ತೆ ಮಾವಂದಿರಿಗೆ ಏಳು ವರ್ಷ ಜೈಲುವಾಸ ವಿಧಿಸಲಾಗುತ್ತದೆ. ಅಥವಾ ಏಳು ವರ್ಷಗಳೊಳಗೆ ಹೆಣ್ಣು ಅಸಹಜ ಸಾವಿನಲ್ಲಿ ಸತ್ತರೂ ಅತ್ತೆ ಮನೆಯವರು ಕಿರುಕುಳ ಕೊಟ್ಟಿದ್ದು ಸಾಬೀತಾದರೆ ಶಿಕ್ಷೆಗೆ ಅರ್ಹರಾಗುತ್ತಾರೆ.

ಆದರೆ ಅಪರಾಧ ಸಾಬೀತಾಗುವುದೇ ಬಹಳ ವಿರಳ, ಅನ್‌ಟಿ ಡ್ವಾರಿ ಸೆಲ್ ನಲ್ಲಿ ಬಹಳ ಕಡಿಮೆ ಸಿಬ್ಬಂದಿಯಿರುವುದೂ ಇಲ್ಲಿ ಒಂದು ಮುಖ್ಯ ಕಾರಣವಾಗಬಹುದೇನೊ. ಈ ಸೆಲ್ ನಲ್ಲಿ ಕೇವಲ ಒಬ್ಬರು ಎಸ್ ಡಿ ಒಬ್ಬರು ಡಿ ಎಸ್ ಪಿ ಇಬ್ಬರು ಮಹಿಳಾ ಪೋಲೀಸ್ ಇನ್ಸ್‌ಪೆಕ್ಟರ್, ಮತ್ತು ಒಬ್ಬ ಎಸ್ ಐ ಇದ್ದರು. ತೀರ ಇತ್ತೀಚೆಗೆ ಇಬ್ಬರು ಡಿ ಎಸ್ ಪಿ, ಇಬ್ಬರು ಡಬ್ಲ್ಯು ಪಿ ಐ ಮತ್ತು ನಾಲ್ವರು ಪಿ ಐ ಸೇರಿದ್ದಾರೆ.

ಆದರೆ ಮಹಿಳಾ ಸಂಘಟನಕಾರರ ಪ್ರಕಾರ

ಪೋಲಿಸರ ಮನೋಭಾವ ಬದಲಾದ ಹೊರತೂ ಎ ಡಿ ಸಿ ಯಲ್ಲಿನ ಸಂಖ್ಯೆ ಹೆಚ್ಚಿಸಿ ಪ್ರಯೋಜನವಿಲ್ಲ. ಪೋಲೀಸರಲ್ಲಿ ಸದ್ಯಕ್ಕಂತೂ ಕಳ್ಳತನ-ಕೊಲೆ-ಕಲಹಗಳಷ್ಟು ವರದಕ್ಷಿಣೆ ಕೇಸುಗಳು ಮುಖ್ಯವಲ್ಲ ಎಂಬ ಭಾವನೆ ಬೇರೂಬಿಟ್ಟಿದೆ.

ಈ ಸಮಸ್ಯೆಯ ಪರಿಹಾರದತ್ತ ಚಿಂತಿಸುವಾಗ ಕೆಲವು ಉಪಾಯಗಳು ಗೋಚರಿಸುತ್ತವೆ. ಯಾವುದೇ ಹುಡುಗಿಯನ್ನು ವರದಕ್ಷಿಣೆಗಾಗಿ ಪೀಡಿಸುತ್ತಿದ್ದರೆ ಆ ಕುರಿತಾದ ಎಲ್ಲಾ ರೀತಿಯ ಸಾಕ್ಷಾಧಾರಗಳು ಸಿಗುವಂತೆ ಆಕೆ ಎಚ್ಚರವಹಿಸಬೇಕು. ಪ್ರತಿದಿನದ ಡೈರಿ ಬರೆಯುವದು, ತಂದೆ-ತಾಯಿ-ಸ್ನೇಹಿತರಿಗೆ ತನ್ನ ಕಷ್ಟಗಳ ಮತ್ತು ಮನೆಯವರ ಬೇಡಿಕೆಗಳಬಗ್ಗೆ ಪತ್ರ ಬರೆಯುವದು ಹೊಡೆತದ ಗಾಯಗಳುಂಟಾಗಿದ್ದರೆ ಆಸ್ಪತ್ರೆಗಳಲ್ಲಿ ಅದಕ್ಕೆ ಚಿಕಿತ್ಸೆ ಪಡೆಯುವದು, ಇತ್ಯಾದಿಗಳು ಹಿಂಸೆಯ ಸ್ಪಷ್ಟ ದಾಖಲೆಗಳಾಗುತ್ತವೆ.

ವರದಕ್ಷಿಣೆ ಪೀಡೆಗಳು ಕೊಲೆಯತನಕ ಬರಬಾರದೆಂದು ನಾವು ಆಶಿಸೋಣ. ಆದರೆ ಒಂದೊಮ್ಮೆ ಅಂಥ ದುರಂತ ಸಂಭವಿಸಿ ಬಿಟ್ಟರೆ ಹೆಣ್ಣಿನ ತಂದೆ ತಾಯಿಗಳು ತಕ್ಷಣ ಸ್ಥಳಕ್ಕೆ ಧಾವಿಸಿ ಪೀಡಿತಳ ಹೇಳಿಕೆ ತೆಗೆದುಕೊಳ್ಳಬೇಕು. ಕೇಸನ್ನು ಸಮೀಪದ ಪೋಲೀಸ್ ಠಾಣೆಗೆ ದಾಖಲಿಸಿ ವಿಚಾರಣೆಯಲ್ಲಿ ಎಲ್ಲ ರೀತಿಯ ಸಹಕಾರ ನೀಡಬೇಕು. ಒಟ್ಟಿನಲ್ಲಿ ತಪ್ಪಿತಸ್ಥರಿಗೆ ಶಿಕ್ಷೆ ಆಗುವಂತೆ ಪ್ರಯತ್ನಿಸುವದು ಇಂಥ ಅಪರಾದಗಳನ್ನು ತಗ್ಗಿಸುವಲ್ಲಿ ತುಂಬ ಪ್ರಯೋಜನಕಾರಿ. ಅಲ್ಲದೆ ವರದಕ್ಷಿಣೆ ಕೇಸಿನಲ್ಲಿ ಜಾಮೀನು ಸಿಗುವುದಿಲ್ಲ ಎಂಬುದು ಎಲ್ಲರೂ ಅರಿತಿರಬೇಕಾದ ಅಂಶ.

ಆದರೆ ಇವೆಲ್ಲಕ್ಕಿಂತ ಮುಖ್ಯವಾಗಿ "ಕೊಟ್ಟ ಹೆಣ್ಣು ಕುಲದ ಹೊರಗೆ" ಎನ್ನದೆ ತಂದೆ ತಾಯಿಗಳು ಹೆಣ್ಣು ಮಕ್ಕಳಿಗಾಗಿ ತಮ್ಮ ಮನದ ಮನೆಯ ಬಾಗಿಲನ್ನು ತೆರೆದಿಟ್ಟರೆ ಮಾತ್ರ ಮೊಗ್ಗರಳದೇ ಮಣ್ಣುಗೂಡುತ್ತಿರುವ ಬದುಕುಗಳನ್ನು ನೈಜ ಅರ್ಥದಲ್ಲಿ ಅರಳಿಸಲು ಸಾಧ್ಯವಿದೆ.

### ವರದಕ್ಷಿಣೆ ಸಾವು ಜಿಲ್ಲಾವಾರು ಅಂಕಿ-ಅಂಶಗಳು

| ಜಿಲ್ಲೆ | 1989 | 90 | ಕಳೆದ ಐದು ವರ್ಷಗಳ ಸರಾಸರಿ. |
|---|---|---|---|
| ಕರ್ನಾಟಕ ರಾಜ್ಯದ್ದು | 190 | 198 | 152-00 |
| ಬೆಂಗಳೂರು | 45 | 61 | 40-00 |
| ಬೆಂಗಳೂರು ಜಿ. | 19 | 13 | 12-00 |
| ಕೋಲಾರ | 6 | 5 | 5-00 |
| ತುಮಕೂರು | 12 | 2 | 5-80 |
| ಚಿತ್ರದುರ್ಗ | 7 | 8 | 5-00 |
| ಶಿವಮೊಗ್ಗ | 4 | 20 | 8-[illegible]0 |
| ಮೈಸೂರು | 9 | 4 | 6-80 |
| ಮಂಡ್ಯ | 2 | 8 | 3-60 |
| ಹಾಸನ | 4 | [illegible] | 3-00 |
| ಚಿಕ್ಕಮಗಳೂರು | 2 | 3 | 2-20 |
| ಕೊಡಗು | - | 1 | 0-80 |
| ಬಿಜಾಪುರ | 11 | 12 | 9-00 |
| ಬೆಳಗಾಂ | 14 | 8 | 6-00 |
| ಗುಲ್ಬರ್ಗ | 24 | 17 | 14-[illegible]0 |
| ಬೀದರ | 7 | 9 | 7-60 |

## ವರದಕ್ಷಿಣೆ ಹಿಂಸೆ- ಜಿಲ್ಲಾವಾರು ಅಂಕಿ ಅಂಶಗಳು,

| ಜಿಲ್ಲೆ | 1989 | 19 0 | ಕಳೆದ ಐದು ವರ್ಷಗಳ ಸರಾಸರಿ. |
|---|---|---|---|
| ಒಟ್ಟು ಕರ್ನಾಟಕ | 649 | 422 | 453–40 |
| ಬೆಂಗಳೂರು | 255 | 185 | 211-80 |
| ಬೆಂಗಳೂರು ಜಿಲ್ಲೆ | 55 | 44 | 37-00 |
| ಕೋಲಾರ | 3 | 4 | 3-40 |
| ಕೆ. ಜಿ. ಎಫ್. | 16 | 7 | 8-40 |
| ತುಮಕೂರು | 21 | 6 | 11–00 |
| ಚಿತ್ರದುರ್ಗ | 22 | 15 | 17–00 |
| ಶಿವಮೊಗ್ಗ | 29 | 15 | 19–50 |
| ಮೈಸೂರು | 16 | 6 | 10-80 |
| ಮಂಡ್ಯ | 14 | 9 | 1[illegible]-40 |
| ಹಾಸನ | 6 | 8 | 5-00 |
| ಚಿಕ್ಕಮಗಳೂರು | 3 | 6 | 2–20 |
| ದಕ್ಷಿಣ ಕನ್ನಡ | 5 | 1 | 3–00 |
| ಬೆಳಗಾಂ | 9 | 11 | 4-40 |
| ಬಿಜಾಪುರ | 33 | 37 | 28-00 |
| ಧಾರವಾಡ | 20 | 7 | 10-00 |
| ಗುಲ್ಬರ್ಗ | 70 | 13 | 20-20 |
| ಬಳ್ಳಾರಿ | 23 | 18 | 13–20 |
| ಬೀದರ್ | 10 | 8 | 5-60 |

ಸಂಗ್ರಹಾನುವಾದ:- ಉಷಾ ಹೆಗಡೆ
(ಕೃಪೆ- ಇಂಡಿಯನ್ ಎಕ್ಸ್‌ಪ್ರೆಸ್)

## ಓದುಗರಲ್ಲಿ ಮನವಿ

ಗಗನಕ್ಕೇರುತ್ತಿರುವ ಮುದ್ರಣ ಕಾಗದದ ಬೆಲೆ, ಅಂಚೆ ವೆಚ್ಚ ಮುಂತಾದವುಗಳಿಂದಾಗಿ ಪತ್ರಿಕೆಯನ್ನು ಪ್ರಕಟಿಸುವುದು ಕಷ್ಟಕರವಾಗಿದೆ. ಮಾನಸಕ್ಕೆ ಆಸಕ್ತಿ ಹಾಗೂ ಪ್ರೋತ್ಸಾಹ ವ್ಯಕ್ತಪಡಿಸಿ ಪತ್ರ ಬರೆಯುವ ಸಹೃದಯರು ಹಾಗೂ ಚಂದಾ ಮುಗಿದಿರುವ ಓದುಗರು ತಕ್ಷಣ ಚಂದಾಹಣ ಕಳಿಸಿದರೆ ಪತ್ರಿಕೆಯನ್ನು ಉಳಿಸಿ ಬೆಳೆಸಲು ನೀರೆರೆದು ಪ್ರೋತ್ಸಾಹಿಸಿದಂತಾಗುತ್ತದೆ. ಓದುಗರೆಲ್ಲರನ್ನು ಉಳಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾದರೂ ಉಚಿತವಾಗಿ ಒಂದು ಸಂಚಿಕೆಯನ್ನು ಕಳಿಸಲು ಉಂಟಾಗುವ ಖರ್ಚನ್ನು ಭರಿಸುವುದು ಪತ್ರಿಕೆಗೆ ಹೊರೆಯಾಗುತ್ತದೆ. ಪ್ರಿಯ ಓದುಗರು ಸಹಕರಿಸಿ ತಕ್ಷಣ 20-00 ರೂ ಚಂದಾ ಹಣ ಕಳಿಸಿಕೊಡಬೇಕೆಂದು ಕೋರುತ್ತೇವೆ.

ಸಂ. ಮಂ.

# ಉದ್ಧರೇದಾತ್ಮಾನಾತ್ಮಾನಾಂ......

"ಕಾಯ ಕಂದಿದರೇನು? ಮಿರ್ರನೆ ಮಿನುಗಿದರೇನು" ಎಂದು ಕೇಳಿದ ಅಕ್ಕ ಮಲ್ಲಿಕಾರ್ಜುನನೊಲಿದ ಮೇಲೆ ಈ ದೇಹವನ್ನು ನಾಯಿ ತಿಂದರೇನು? ನೀರು ಕುಡಿದರೇನು? ಎಂದು ಪ್ರಶ್ನಿಸಿದ್ದಾಳೆ. ಎಂಟುನೂರು ವರ್ಷಗಳ ಹಿಂದೆ ನಮ್ಮ ನಾಡಿನ ಹೆಣ್ಣೊಬ್ಬಳು ಅರಮನೆ, ರಾಣಿಪಟ್ಟ, ಯೌವನ, ಚೆಲುವಿನ ದೇಹ ಎಲ್ಲವನ್ನು ಧಿಃಕರಿಸುವಂತೆ ಮಾಡುವ ಘನವಾದ ಗುರಿಯನ್ನು ಹೊಂದಿದ್ದಳು ಎಂಬುದನ್ನು ನೆನಸಿಕೊಂಡಾಗ ಅಚ್ಚರಿಯಾಗುತ್ತದೆ. ಇಂದು ಮಹಿಳಾ ಕೋಟೆಗಳ ನಡುವೆ ಇಂತಹ ಘನ ಉದ್ದೇಶ ಹೋಗಲಿ, ಮದುವೆ ಗಂಡ-ಮನೆ-ಸಂಪತ್ತು ಇವುಗಳನ್ನು ಬಿಟ್ಟು ಒಂದು ಉದ್ದೇಶ ಗುರಿ ಎಷ್ಟು ಜನರಿಗೆ ಇದೇ ಎಂದು ಯೋಚಿಸಿದಾಗ ಹುಟ್ಟಿದ ಹೆಣ್ಣುಗಳೆಲ್ಲ ಮದುವೆಯಾಗಲೇಬೇಕು, ಹೆಸರಿಗೊಬ್ಬ ಗಂಡ ಇರಲೇಬೇಕು ಆ ಗಂಡನನ್ನು ಪಡೆಯುವುದಕ್ಕಾಗಿಯೇ ಅವಳು ಹುಟ್ಟಿದಾಗಿನಿಂದಲೂ ತಯಾರಿ ನಡೆಸಬೇಕು. ಕಣ್ಣು, ಹುಬ್ಬು, ಕೂದಲು, ಮೈ ಹೊಳಪು ಇವುಗಳನ್ನೆಲ್ಲ ಆಕರ್ಷಕಗೊಳಿಸಿಕೊಳ್ಳುವುದೇ ಅವಳ ಪರಮ ಕರ್ತವ್ಯ! ಎಂಬುದೇ ಎಲ್ಲರ ನಂಬಿಕೆ. ಇಂತಹ ಸಮಾಜದಲ್ಲಿ ಹೆಣ್ಣು ಶೋಷಣೆಗೊಳಗಾಗುವುದು ವರದಕ್ಷಿಣೆಯ ಅತ್ಯಾಚಾರಕ್ಕೆ ಬಲಿಯಾಗುವುದು-ದಹನಕ್ಕೆ ಒಳಗಾಗುವುದು ಏನೂ ಆಶ್ಚರ್ಯವಲ್ಲ. ಹೆಣ್ಣಿಗೆ ತನ್ನ ಈ ಸಾಮಾನ್ಯ ಅಂಗಾಂಗಗಳಿಗಿಂತ ಹೊರತಾಗಿ ಮೆದುಳು ಅದರಲ್ಲಿ ವಿಚಾರ ಬುದ್ಧಿ ಪ್ರತಿಭೆ ಸಾಮರ್ಥ್ಯ ಎಲ್ಲಾ ಇದೆ ಅದರ ಮೂಲಕವಾಗಿ ತಾನು ಮಡದಿ, ತಾಯಿಯಾಗುವುದಲ್ಲದೇ ಇನ್ನೂ ಏನೇನೋ ಮಾಡಬಲ್ಲೆ, ಒಂದು ವೇಳೆ ಯೋಗ್ಯ ಗಂಡು ಸಿಗದೇ ಮದುವೆಯಾಗದಿದ್ದರೂ ತನ್ನ ವ್ಯಕ್ತಿತ್ವದ ಸಾಮರ್ಥ್ಯದ ಬಲದಿಂದ ಸಾರ್ಥಕವಾಗಿ ಬದುಕಬಲ್ಲೆ ಎಂದು ಯೋಚಿಸಲು ಹಾಗೂ ಹಾಗೇ ಬದುಕಲು ಕಲಿತರೆ ಶೋಷಣೆಯಿಂದ ಅರ್ಧ ಮುಕ್ತಳಾದಂತೆ ಎಲ್ಲಿಯತನಕ ಆಕೆ ತನ್ನ ದೇಹವನ್ನು ಮೀರಿ ಯೋಚಿಸುವುದಿಲ್ಲವೋ ಅಲ್ಲಿಯ ತನಕ ಆಕೆ ಹೊಟ್ಟೆಯ ಪಾಡಿಗಾಗಿ, ಮಾತ್ರವಲ್ಲ ಫ್ಯಾಷನ್ನಿಗಾಗಿಯೂ ವಿಲಾಸಕ್ಕಾಗಿಯೂ ಮೈಮಾರಿಕೊಳ್ಳಲು ಸಿದ್ಧಳಾಗುತ್ತಾಳೆ ಪ್ರಾಣಿಯಂತೆ ಬದುಕುತ್ತಾಳೆ

ಹಿಂದೆ ಎರಡನೇ ಮಹಾಯುದ್ಧದ ನಂತರ ಅಮೇರಿಕಾದಲ್ಲಿ ನಡೆದ ವಿದ್ಯಮಾನಗಳನ್ನು ಈ ಸಮಯದಲ್ಲಿ ನೆನಪಿಸಿಕೊಳ್ಳಬಹುದು. ಆಗ ಅಲ್ಲಿ ಗೃಹಿಣೀ ಜೀವನವೇ ಮಹಿಳೆಗೆ ಪರಮಭೂಷಣವೆಂದ ಭಾವಿಸಿ ಅದಕ್ಕಾಗಿಯೇ ಹುಡುಗಿಯರನ್ನು ತಯಾರು ಮಾಡಲಾಗುತ್ತಿತ್ತು. ಹೈಸ್ಕೂಲು ಕಾಲೇಜುಗಳಲ್ಲಿ ಹುಡುಗಿಯರಿಗೆ ತಮ್ಮ ಆಕರ್ಷಣೆ ಕಾಯ್ದುಕೊಳ್ಳುವ ಕುರಿತು ಪಠ್ಯಕ್ರಮ ಯೋಜಿಸಲಾಗುತ್ತಿತ್ತು. ಹಾಗೆ ತರಬೇತಾದವರಿಗೆ ಪಿ ಎಚ್ ಟಿ (ಪುಟ್ಟಿಂಗ್ ಹಸ್ಬ್ಯಾಂಡ್ ತ್ರೂ) ಡಿಗ್ರಿ ನೀಡಲಾಗುತ್ತಿತ್ತು. ಇದರಿಂದಾಗಿ ೧೫ ರಿಂದ ೧೭ ರ ಒಳಗೆ ಅವರ ಮದುವೆಯಾಗುತ್ತಿತ್ತು. ಆದರೆ ಒಮ್ಮೊಂದೊಮ್ಮೆಲೆ ಈ ವಿಚಾರಧಾರೆ ಇದ್ದಕ್ಕಿದ್ದಂತೆ ದಿಕ್ಕು ಬದಲಾಯಿಸಿದ್ದನ್ನು ಬೆಟ್ಟಿ ಫ್ರೀಡನ್ ಉಲ್ಲೇಖಿಸುತ್ತಾರೆ. ಇಂಥ ವಿವಾಹಿತ ಮಹಿಳೆಯರು ಬಿಡುವಾಗಿ ಪರಸ್ಪರ ಭೆಟ್ಟಿಯಾದಾಗ ತಮ್ಮ ನಿರಾಶೆ, ಹತಾಶೆಗಳನ್ನು ವಿನಿಮಯ ಮಾಡಿಕೊಳ್ಳುವುದನ್ನು ಆಕೆ ಗಮನಿಸಿದಳು. ಗಂಡ ಮನೆ ಮಕ್ಕಳು ಇವುಗಳಲ್ಲೇ ತನಗೆ ನೆಮ್ಮದಿಯಿಲ್ಲ ಎನನ್ನೋ ಕಳೆದುಕೊಂಡಂತೆ ತಳಮಳ

ಇವನ್ನೆಲ್ಲ ಗಮನಿಸಿದ ಬೆಟ್ಟಿ ಫ್ರೀಡನ ಮಹಿಳೆಯರಿಗೆ ತಮ್ಮ ತಮ್ಮ ವ್ಯಕ್ತಿತ್ವಗಳನ್ನು ಗುರುತಿಸಿಕೊಳ್ಳಲು ಅದನ್ನು ಬೆಳೆಸಿಕೊಳ್ಳಲು ಕರೆ ನೀಡಿದಳು. ಅಲ್ಲದೇ ವ್ಯಕ್ತಿತ್ವದ ಬೆಳವಣಿಗೆಯಾಗಬೇಕಾದರೆ ಸ್ತ್ರೀಯರು ಪುರುಷರ ಮೇಲೆ ಸಂಪೂರ್ಣ ಅವಲಂಬಿಗಳಾಗಿರಬಾರದು. ಪೂರ್ಣ ಅವಲಂಬನೆ ಗುಲಾಮರನ್ನಾಗಿ ಮಾಡುತ್ತದೆ, ಈ ವೈಚಾರಿಕ ಗುಲಾಮಗಿರಿ ಅವರನ್ನು ಕ್ಷುದ್ರ ಜೀವಿಗಳನ್ನಾಗಿ ಮಾಡುತ್ತದೆ, ಕೇವಲ ಸೌಂದರ್ಯಕ್ಕೆ ಮಹತ್ವ ಕೊಡುವ ಹೆಣ್ಣು ಚೆಲುವೆಣ್ಣಾಗಬಹುದೇ ವಿನಹ ಮರ್ಯಾದಸ್ಥ, ಸ್ವಂತ ವ್ಯಕ್ತಿತ್ವವನ್ನುಳ್ಳವಳಾಗುವುದಿಲ್ಲ. ತಮ್ಮನ್ನು ಶೃಂಗರಿಸಿಕೊಳ್ಳುವುದರಲ್ಲಿಯೇ ಪರಮಾರ್ಥ ಕಾಣುವ ಹೆಣ್ಣು

ಜೀವನದ ಮಹತ್ವದ ಮೌಲ್ಯಗಳನ್ನು ಹೇಗೆ ಕಂಡು ಕೊಂಡಾಳು? ಕ್ಷುಲ್ಲಕ ವಿಚಾರಗಳನ್ನು ಬಿಟ್ಟು ಸ್ತ್ರೀಯರು ತಮ್ಮ ಅಂತರಂಗದ ವಿಕಾಸಕ್ಕೆ ಹೆಚ್ಚು ಗಮನವೀಯ ಬೇಕೆಂದು ಆಕೆ ಪ್ರತಿಪಾದಿಸಿದಳು. ಅದಕ್ಕಾಗಿ ಸ್ತ್ರೀಯರಿಗೆ ನೀಡಲಾಗುತ್ತಿದ್ದ ಶಿಕ್ಷಣದಲ್ಲಿ ಬದಲಾವಣೆಯಾಗ ಬೇಕೆಂದೂ ಮಹಿಳೆಯರ ಬೌದ್ಧಿಕ ಹಾಗೂ ವಿಕಾಸಕ್ಕೆ ಎಡೆ ಮಾಡುವ ಶಿಕ್ಷಣವನ್ನು ಹೊಂದಿದ ಸ್ತ್ರೀಯರು ಕುಟುಂಬಕ್ಕೆ ಅಂತೆ ಸಮಾಜಕ್ಕೆ ಬಹುದೊಡ್ಡ ಕೊಡುಗೆ ಎನಿಸಬಲ್ಲರು ಎಂಬುದನ್ನು ಆಕೆ ಪ್ರತಿಪಾದಿಸಿದಳು. ಇದೆಲ್ಲವುಗಳಿಂದ ಅಮೇರಿಕದ ಸ್ತ್ರೀ ಸಮಾಜದಲ್ಲಿ ಬಹುದೊಡ್ಡ ಕ್ರಾಂತಿಯಾಯಿತು. ಅಮೇರಿಕನ್ ಮಹಿಳೆಯರು ಸ್ವತಂತ್ರ ವ್ಯಕ್ತಿತ್ವದ ಪ್ರತಿಭೆಯಿಂದ ಬೆಳಗತೊಡಗಿದರು. (ಈ ವ್ಯಕ್ತಿ ಸ್ವಾತಂತ್ರ್ಯದ ಅತಿ ಮುಂದೆ ವಿಪರೀತ ಪರಿಣಾಮಕ್ಕೆಡೆಕೊಟ್ಟು ಇಂದು ಗಂಡು ಹೆಣ್ಣುಗಳಿಬ್ಬರೂ ಬಂಧನದಲ್ಲಿ ಬಾಳಲಾರದಂತಾದುದು ಒಂದು ದುರಂತವೇ)

ಇಂದು ಭಾರತೀಯ ಮಹಿಳೆಗೆ ಇಂದಿನ ಅಮೇರಿಕದ ಮಹಿಳೆಯ ಉಚ್ಛಂಖಲ ಪ್ರವೃತ್ತಿಯೂ ಅಪಾಯಕಾರಿಯೇ. ೫೦ರ ದಶಕದ ಪಿ ಎಚ್ ಟಿ ಮಹಿಳೆಯೂ ತ್ಯಾಜ್ಯಳೇ. ಅವೆರಡರ ನಡುವಿನ ವಿಚಾರಶೀಲಳೂ, ವಿವೇಕಪರಳೂ ತನ್ನೊಳಗಿನ ಶಕ್ತಿ, ಸಾಮರ್ಥ್ಯ, ಪ್ರತಿಭೆಗಳನ್ನು ಗುರುತಿಸಿಕೊಂಡು ಅದರಿಂದ ಸಂತೋಷ, ಸಮಾಧಾನಗಳನ್ನು ಇತರರಿಗೂ ನೀಡಿ ಧನ್ಯತೆ ಪಡೆಯುವ ಮಹಿಳೆ ದೇಶಕ್ಕೆ ಸಮಾಜಕ್ಕೆ, ವ್ಯಕ್ತಿ ಶಕ್ತಿಯನ್ನು ನೀಡಿ ಪ್ರಯೋಜಕಳಾಗಬಲ್ಲ ಮಹಿಳೆ ತನ್ನ ಸಮಯ ಕಳೆಯುವ ಹುಚ್ಚಿನಿಂದ ಓಡಿದು ವಿನೋದ ವಿಹಾರ-ಸೌಕರ್ಯಗಳ ತನಕ ಎಲ್ಲದಕ್ಕೂ ಗಂಡನನ್ನು ಅವಲಂಬಿಸದ ಮಹಿಳೆ ಇಂದು ಹೊಸತಾಗಿ ಹುಟ್ಟಬೇಕಾಗಿದೆ. ಬಹುಶಃ ಹುಟ್ಟಿದಂದಿನಿಂದಲೇ ನಾವು ಹೆಣ್ಣುಗಳನ್ನು ಬೆಳೆಸುತ್ತಿರುವ ರೀತಿ ಬದಲಾಗದೇ ಹೋದರೆ "ಈ ಹೊಸ ಹೆಣ್ಣಿನ ಹುಟ್ಟು" ಸಾಧ್ಯವಾಗುವುದೇ ಇಲ್ಲ. ಮಗನಂತೆಯೇ ಮಗಳನ್ನು ಭಾವಿಸಿ ಅವಳಲ್ಲಿರಬಹುದಾದ ಶಿಲ್ಪಿ, ಕಲಾವಿದೆ, ತಂತ್ರಜ್ಞೆ, ವೈದ್ಯೆ, ವಿಜ್ಞಾನಿ, ಶಿಕ್ಷಕಿ ಅಥವಾ ರಾಷ್ಟ್ರ ನಿರ್ಮಾಪಕಿಯ ಯಾವುದೋ ರೂಪ ಅದನ್ನು ಗುರುತಿಸಿ ಪೋಷಿಸುವ, ಅದರಿಂದ ಆಕೆ ಉದ್ಯೋಗ ಪಡೆದು ಶ್ರೀಮಂತಳಾಗಬೇಕೆಂದು ಮಾತ್ರ ಯೋಚಿಸದೇ ಅದರಿಂದ ಆಕೆ ಒಳ್ಳೆಯ ರಾಷ್ಟ್ರ ಕಟ್ಟಬಲ್ಲಳೆಂದು ಯೋಚಿಸುತ್ತ ಆಕೆಯಲ್ಲೂ ಕನಸು ಬಿಂಬಿಸುತ್ತ ಬೆಳೆಸಿದರೆ ಇಂದಲ್ಲ ನಾಳೆ ಆ ಕನಸು ನನಸಾದೀತು. ಬೆತ್ತಲೆ ಮೆರವಣಿಗೆಗಳಲ್ಲಿ ಬೇಯುವ ಸೀಮೆ ಎಣ್ಣೆಯಲ್ಲಿ ಉರಿಯುವ ಆಫೀಸು ಮನೆಗಳ ನಡುವಿನ ಚಕ್ರದಲ್ಲಿ ಸುತ್ತುತ್ತ ಗಂಡನ ಮೂದಲಿಕೆಯ ಚಾಟಿಯೇಟು ತಿಂದು ನೋಯುವ ಈ ಕತ್ತಲೆಯಿಂದ ತನ್ನ ಆಸೆ ಆಕಾಂಕ್ಷೆಗಳ ಸಾಕಾರದ ಬೆಳಕಿನತ್ತ ಅವರು ಸಾಗುವುದು ಸಾಧ್ಯವಾಗಬಹುದು.

ಶ್ರೀಮತಿ ವಿಜಯನಳಿನಿ.

---

## ಅಂತರಂಗದುಸಿರು

ಅಂಗಳದ ತೋಟದಲ್ಲಿ
ಒಂದು ಮುಂಜಾವಿನಲ್ಲಿ
ತುಂಡು ಲಂಗದ ಹುಡುಗಿ
ಬೆಳಕ ಬೀಜದ ಮುಂದೆ
ನಿಂತು ಮೈ ಮರೆತಲ್ಲೆ ಬೆವೆಯುತಾಳೆ
ಕ್ಷಣ ಕಳೆವುದರೊಳಗಾಗಿ ಬೆಳೆಯುತಾಳೆ
ಕನಸು ಮಾಡುವುದಲ್ಲ
ಕತ್ತಲೆಯ ಪರದೆಯೊಳೆ
ಬೆಳ್ಳಿ ಪರದೆಯ ಹುಡುಗಿ
ಬಾಡುತಾಳೆ
ಬೆಳ್ಳಿ ಕನಸಿನ ಹುಡುಗ
ಅಂಗಳಕೆ ಬಂದವನು
ಹೊಸ್ತಿಲಾಚೆಗೆ ನಿಂತು ಕರಗುತಾನೆ
ಅವನು ಕರೆಯುವುದಿಲ್ಲ
ಹುಡುಗಿ ಕದಲುವುದಿಲ್ಲ
ಅಂಗಳದ ತುಂಬೆಲ್ಲ ಮದುವೆ ನೆರಳು
ಒಳ ಮನೆಗೆ ಹನಿ ಬೆಳಕು
ಕಂಬದೆದೆಗಳ ಮೇಲೆ ಪುಟ್ಟ ಲಾಟೀನುಗಳು
ಯಾವನೋ ವಸುದೇವ ಕೂಗುತಾನೆ
ಬೆಳ್ಳಿ ಕನಸಿನ ಹುಡುಗಿ ಬಾಗುತಾಳೆ
ಒಂದು ಕೋಣೆಯ ನಿಂದು
ಒಂದು ಮಂಚವೆ ತಾಯಿ?
ಮನೆಗೆ ಮನೆಯೇ ಇಂದು ಪ್ರಸ್ತಭೂಮಿ
ಅಂಗಳಕೆ ಬರಬೇಡ ತಂಗಾಳಿಯೆನಬೇಡ
ಬಾಣಂತಿ ಮೈಗೆಲ್ಲ ಕಂಸಗಾಳಿ!
ಹೆತ್ತದ್ದು ಹೆಣ್ಣೇನು?
ಎಸೆದು ಬಿಡು.. ಇಂದೇನು ನಾಳೆಯೇನು
ವಸುದೇವನುಸಿರಿನಲ್ಲಿ
ಬಳಲು ನಿಟ್ಟುಸಿರಿನಲಿ
ಇಂಸಲ್ಲಿ ನಾಳೆ
ಇಳಿದು ಬಂದಾನೊಬ್ಬ ಗೋಪಬಾಲ!

-ವಿದ್ಯಾ ಭರತನಹಳ್ಳಿ.

# ದೀಕ್ಷೆ

ಭಾಗೀರಥಿ ಹೆಗಡೆ.

ಮುಗಿಲು—
ಇರಿವ ಕಣ್ಣಲ್ಲೇ ಎಲ್ಲಾ
ಉರುಳುವ ಭೂಮಿ
ತಿರುಗುವ ಸೂರ್ಯ.
ಸುತ್ತು ಹಾಕುತ್ತಿರುವ
ನಕ್ಷತ್ರ ನೀಹಾರಿಕೆ
ವೃತ್ತಕ್ಕೆ ತನ್ನ ತೆತ್ತುಕೊಂಡು
ಇದ್ದಲ್ಲೇ ಬಿದ್ದ ಹಾದಿ.
ಗೋಲಿ—
ಹೊಳೆವ ಕಣ್ಣಲ್ಲೇ ಎಲ್ಲಾ
ವರ್ಷ ವಸಂತ
ಶರತ್ ಹೇಮಂತ
ಗಾಳಿ ಪಟದಿತ್ತರ
ನೂರು ರೆಕ್ಕೆಯ ವಿಸ್ತಾರ
ನೆಲೆ ನಿಂತ ನೆಲದ ಆಳ
ದಾರ ಹಿಡಿದು
ಆಡಿಸುವ ಕೈಯಲ್ಲಿ
ಧೂಳೊರೆಸುವ ಚಿಂದಿ
ನಿಂತ ಬಂಡಿಯ ಕೆಳಗೆ
ಬೆಳೆಯಲಾರದ ಬದುಕು
ಉರುಳಲಾರದ ಒಂಟಿಗಾಲಿ.
ಕಡಲು—
ಭೋರ್ಗರೆವ ಕಣ್ಣಲ್ಲೇ ಎಲ್ಲಾ
ವಿರುದ್ಧ ದಿಕ್ಕಿಗೆ ಹೊರಟ
ಬಾಹುಗಳು ಬಂದು ಸೇರಬೇಕಾದ
ವರ್ತುಳದ ಕೊಂಡಿ ಬೆಸೆದು
ಅರೆಗಳಿಗೊಂದಿಷ್ಟು
ಆಧಾರಕೊಟ್ಟು.
ಕೆಳಗು ಮೇಲಾಗಿ
ಒಳಗು ಹೊರಗಾಗಿ
ಜಡ್ಡುಗಟ್ಟಿದ ಕೀಲು
ಸಲೀಸು
ಉರುಳಿಸಲೇಬೇಕೆಂಬ
ದಿಟ್ಟ ಹಟ
ನೆಟ್ಟ ನೋಟ
ಸತ್ತ ಹುಲ್ಲಿನೊಳಗೂ
ಹರಿತ್ತು ಹರಿಸುವ
ತವಕ.

# ಒಂದು ಆಪ್ತ ಧ್ವನಿ

ವಿಮರ್ಶೆ

"ಚಂದ್ರನನ್ನು ಕರೆಯಿರಿ ಭೂಮಿಗೆ"
(ಕವನ ಸಂಕಲನ) ಲೇ- ಸವಿತಾ ನಾಗಭೂಷಣ ಸಂವಾದ ಪ್ರಕಾಶನ ಮಲ್ಲಾಡಿಹಳ್ಳಿ.

— ಈಗಾಗಲೇ ತಮ್ಮ ಮೊದಲ ಕವನ ಸಂಕಲನ "ನಾ ಬರುತ್ತೇನೆ ಕೇಳು" ಮೂಲಕ ಕಾವ್ಯ ಕ್ಷೇತ್ರದಲ್ಲಿ ಗಟ್ಟಿ ಪಾದಗಳನ್ನೂರಿದ ಸವಿತಾ ನಾಗಭೂಷಣ ಈ ಸಂಕಲನದ ಮೂಲಕ ತಮ್ಮ ಹಾದಿಯನ್ನೂ ಸ್ಪಷ್ಟಪಡಿಸಿಕೊಂಡಿದ್ದಾರೆ ಎನ್ನಬಹುದು.

ಸಾಮಾನ್ಯವಾಗಿ ಮಹಿಳೆಯರ ಯಾವುದೇ ಕೃತಿಯ ಬಗ್ಗೆ ನಮ್ಮ ಪೂರ್ವಾಗ್ರಹ ಕಲ್ಪನೆಗಳಾದ ಇದು ಪುರುಷರನ್ನು ಬೈದದ್ದಿರುತ್ತದೆ, ಸ್ತ್ರೀಯ ಅಳಲಿರುತ್ತನೆ, ಶೋಷಣೆಯ ಚಿತ್ರ ಇರುತ್ತದ.

ಒಟ್ಟಾರೆಯಾಗಿ ಒಂದು "ಸ್ತ್ರೀ ಧ್ವನಿ" ಯನ್ನು ಮನಸ್ಸಿನಲ್ಲಿ ತಂದುಕೊಳ್ಳುವುದು ಸಹಜ. ಆದರೆ ಸವಿತಾ ನಾಗಭೂಷಣ ಇದಕ್ಕೆ ಹೊರತಾದವರು.

ಇಲ್ಲಿನ ಬಹುತೇಕ ಕವಿತೆಗಳು ಕೊಡುವ ಅನುಭವ ಮಹಿಳೆಯೊಬ್ಬಳು ಮಾತ್ರ ಕೊಡಬಹುದಾದ ಅನುಭವವಲ್ಲ. ಎಲ್ಲರ ಸಂವೇದನೆಗೂ ಸಂವಾದಿಯಾದದ್ದು.

ಸಾಹಿತ್ಯದ ಆಶಯವಾದ ಹುಡುಕಾಟ ಇಲ್ಲಿನ ಎಲ್ಲ ಒಳ್ಳೆಯ ಕವಿತೆಗಳಲ್ಲೂ ಇದೆ. ಯಾವುದೇ ಶಾಬ್ಧಿಕ ವಜೆ ಇಲ್ಲದೆ ಕವಿತೆ ಸಾಗುತ್ತದೆ. ಪ್ರತಿಮೆಗಳನ್ನು ಇಡುವಲ್ಲಿ ಇವರು ಎಂದೂ ಓದುಗರನ್ನು ಜಂಜಡಕ್ಕೆ ಸಿಕ್ಕಿಸುವುದಿಲ್ಲ. ಆದರೆ ಕವಿತೆಯೊಳಗಿನ ಭಾವ ಮಾತ್ರ ಆಳಕ್ಕೆ ಇಳಿದಂತೆ ನಮ್ಮನ್ನು ಎಳೆದುಕೊಳ್ಳುತ್ತ ಹೋಗುವಂತದ್ದು.

"ಮೃತ್ಯು" ಎನ್ನುವ ಕವಿತೆಯ ಪ್ರಾರಂಭದುದ್ದಕ್ಕೂ ಐಹಿಕ ಭೋಗಗಳಿಗಾಗಿನ ಒದ್ದಾಟ ಚಿತ್ರಿತವಾಗಿದ್ದು, ಕೊನೆಯಲ್ಲಿ.

ಒಮ್ಮೊಮ್ಮೆ ಅನ್ನಿಸುತ್ತೆ
ಎಲ್ಲ ಮರೆತು
ಎಲ್ಲಾದರೂ ಒಂದು ಕಡೆ
ದೂರ ಒಂಟಿಯಾಗಿ
ಮರುಭೂಮಿಯ ಹಾಗೆ
ನಿಂತು ಬಿಡಬೇಕೆಂದು.

ಕ್ರೋಧ ಪಿಕ್ಕವಲ್ಲೂ

ಅನುಕಂಪ ಹನಿಯುವಲ್ಲೂ. ಎದೆಗೆ ಗುದ್ದಿ ಸುಮ್ಮನಿರುವಂತೆ ಒಂದು ತಣ್ಣನೆ ನಿರ್ಲಿಪ್ತತೆಯಲ್ಲಿ ಇಡುತ್ತಾರೆ. "೮೮ ಫೆಬ್ರವರಿ ೩" (ಪತ್ತವರು ವರದಕ್ಷಿಣೆ ತೆರುವುದನ್ನು ತಪ್ಪಿಸಲು ನೇಣು ಹಾಕಿಕೊಂಡ ಕಾನ್ಪುರದ ಮೂವರು ಸಹೋದರಿಯರ ಬಗ್ಗೆ ನೆದು) ಕೊನೆಗೊಳ್ಳುವುದು ಹೀಗೆ.

ಆ ದಿನ ಕಾನ್ಪುರದ
ಎಲ್ಲ ಬೀದಿಗಳಲ್ಲಿ
ಎಲ್ಲ ಮನೆಗಳಲ್ಲಿ
ಹೆಣಗಳದ್ದೇ ವಾಸನೆ
ಎಲ್ಲ ನಿರುಮ್ಮಳ
ಅದನ್ನೇ ಉಸಿರಾಡಿದರು.

ಹೀಗೆ ನಮ್ಮ ನಿಷ್ಕ್ರಿಯತೆಯನ್ನು ವ್ಯಂಗ್ಯವಾಗಿ ತೆರೆದಿಡುವರು.

ಹಳ ಹಳಿಕೆಯಿಂದ ಕಾಡಿದ "ಚಂದ್ರನನ್ನು ಕರೆಯಿರಿ ಭೂಮಿಗೆ" ಬಾಲ್ಯದ ನೆನಪುಗಳನ್ನು ಅತೀ ಸಹಜವಾಗಿ ತೆರೆದಿಡುವಂತದ್ದು ನೆನಪಿನ ಮೂಲಕ್ಕೆ ಕರೆ ಕೊಟ್ಟಂತೆ,

ಕಂದಮ್ಮಗಳೇ
ಕೇಕೇ ಹಾಕಿ ಕುಣಿ ಕುಣಿದು
ಕರೆಯಿರಿ ಚಂದ್ರನನ್ನು ಭೂವಿಗೆ
ಹೂವಿನ ಹಾಗೆ ಬೆರಳುಗಳನ್ನು
ಅರಳಿಸಿ ನೀವೇ
ಕರೆಯಿರಿ ಚಂದ್ರನನ್ನು ಭೂವಿಗೆ
ನಾನು ನಾನಿರುವಂತೆಯೇ
ನೋಡುವೆ ಒಂದು ಘಳಿಗೆ

ಕವಿತೆಯ ಯಾವ ಸಾಲೂ ಘೋಷಣೆಯಲ್ಲಿ ಸಾಮರ್ಥನೆಯೂ ಅಲ್ಲ. ಮಾತಾಡಿದಂತೆ ಒಂದು ಅನುಭವ ಹಂಚಿಕೆ.

ಸೋಲೇ ಇಲ್ಲ! ಎನ್ನುವ ಕವನ ಹೀಗೆ ಶುರುವಾಗುತ್ತೆ.

ಇಲ್ಲಿ.......ನಾನು ಕಣದಲ್ಲಿಲ್ಲ
ಚಪ್ಪರಹಾರ ತುರಾಯಿಗಳೇ
ಚಪ್ಪಾಳೆ ಶಿಳ್ಳೆ ಕೇಕೇಗಳೇ
ನಾನು ಕಣದಲ್ಲಿಲ್ಲ.

ಅದು ಕೊನೆಗೊಳ್ಳುವುದು ಹೀಗೆ.

ಗೆಲ್ಲ ಬಯಸಿದವನಿಗೆ
ಸೋಲೇ ಇಲ್ಲ!

ಹೀಗೆ ಜೀವನವನ್ನು ಸ್ವೀಕರಿಸಹೊರಟ ಮನಸ್ಸು ಹೃದಯ ತನ್ನ ಅನುಭವವನ್ನು ಇಟ್ಟ ರೀತಿ ಇಡೀ ಗದ್ದಲದ ಮಧ್ಯದ ಆಪ್ತ ಧ್ವನಿಯಂತೆ,

ಸುಧಾ ಶರ್ಮಾ ಚವತ್ತಿ.

---

# ಸುದ್ದಿ ಸಂಕಲನ

## ಚದುರಂಗ ಚತುರೆ

ಹಂಗೇರಿಯ ಹದಿನೈದು ವರ್ಷದ "ಜೂಡಿಲ್ ಪೋಲ್ಗರ್" ಎಂಬ ಬಾಲೆ ಪುರುಷರ ಗ್ರ್ಯಾಂಡ್ ಮಾಸ್ಟರ್ ಬಿರುದು ಪಡೆದಿದ್ದಾಳೆ. ಅಂದರೆ ೧೯೯೨ರ ಯಾದಿಯಲ್ಲಿ ಇವಳ ಹೆಸರು ಸೇರ್ಪಡೆಯಾಗಿದೆ. ಈವರೆಗೆ ಕೇವಲ ನಾಲ್ವರು ಮಹಿಳೆಯರು ಮಾತ್ರ ಪುರುಷರ ಗ್ರ್ಯಾಡ್ ಮಾಸ್ಟರ್ ಪಡೆದವರಿದ್ದು ಜೂಡಿತ್ ಐದನೆಯವಳಾಗಿ ಸೇರಿದ್ದಾಳೆ. ಆ ನಾಲ್ವರಲ್ಲಿ ಒಬ್ಬಳು ಇವಳ ಅಕ್ಕ ಎಂಬುದು ಕುತೂಹಲದ ಸಂಗತಿ. ೧೯೯೦ ರಲ್ಲಿ ಜೂಡಿಲ್ ಭಾರತಕ್ಕೆ ಬಂದು ನಮ್ಮ ವಿಶ್ವನಾಥ ಆನಂದರನ್ನು ಸೋಲಿಸಿದ್ದಳೆಂಬುದು ಇನ್ನೊಂದು ಸಂಗತಿ.

## ಹೊಸ ಮಾದರಿ

ಮಾನವ ಕ್ರೌರ್ಯದ ಹೊಸ ಮಾದರಿಯೊಂದು ಇತ್ತೀಚೆ ವರದಿಯಾಗಿದೆ, ಮದರಾಸಿನ ಪಳನಿಸ್ವಾಮಿ ಎಂಬವನು ತನ್ನ ಗರ್ಭಿಣಿ ಸೊಸೆಯ ಬಾಯಿಗೆ ಬಟ್ಟೆ ತುರುಕಿ ಆಕೆಯನ್ನು ಕುರ್ಚಿಗೆ ಕಟ್ಟಿ ಹಾಕಿ, ಆ ಕೋಣೆಯಲ್ಲಿ ವಿಷದ ಹಾವೊಂದನ್ನು ಬಿಟ್ಟ. ಅದು ಹೇಗೋ ಅವಳು ಬಾಯಿಯ ಬಟ್ಟೆ ಕಿತ್ತುಕೊಂಡು ಕಿರುಚಿದ್ದು ಕೇಳಿ ಅಕ್ಕಪಕ್ಕದವರು ಬಂದು ಮಾವನನ್ನು ಪೋಲೀಸಿಗೆ ಹಿಡಿದು ಕೊಟ್ಟಾಗ – ತನ್ನ ಮಗನಿಗೆ ಇನ್ನೊಂದು ಮದುವೆ ಮಾಡಿ ವರದಕ್ಷಿಣೆ ತೆಗೆದುಕೊಳ್ಳುವುದೇ ತನ್ನ ಉದ್ದೇಶವಾಗಿತೆಂದು ಒಪ್ಪಿಕೊಂಡಿದ್ದಾನೆ. ಹಾಗೆಂದರೆ ಇವರ್‍ಯಾರೊ ಹಳ್ಳಿ ಗಮಾರರಲ್ಲ. ತಂದೆ ನಾಟಿ ವೈದ್ಯ. ಮಗ ಎಂ. ಬಿ ಬಿ ಎಸ್ ಡಾಕ್ಟರ್.

## ಕರಾಳ ವರ್ಷ

೧೯೯೧ ಪಾಕಿಸ್ತಾನದ ಮಹಿಳೆಯರ ಪಾಲಿಗೆ ಕರಾಳ ವರ್ಷ. ಈ ವರ್ಷ ಮಹಿಳೆಯರ ಮೇಲಿನ ಅತ್ಯಾಚಾರ, ಚಿತ್ರಹಿಂಸೆ, ವಧೂ ದಹನಗಳು ಇಮ್ಮಡಿಸಿದವು. ನಗರ ಪ್ರದೇಶಗಳಲ್ಲಿ ನಾಲ್ಕು ಐದು ವರ್ಷಗಳ ಬಾಲಕಿಯರ ಮೇಲೆ ಕೂಡಾ ಅತ್ಯಾಚಾರಗಳು ಅತಂಕಕಾರಿ ಪ್ರಮಾಣದಲ್ಲಿ ಹೆಚ್ಚಿದವು. ಇಂತಹ ಲೈಂಗಿಕ ಧಾಳಿಯ ಪರಿಣಾಮವಾಗಿ ಮೂವರು ಬಾಲೆಯರು ಕೊನೆಯುಸಿರೆಳೆದರು.

## ನೈತಿಕ ಅಧಃ ಪತನ

ಜನರಲ್ ಜಿಯಾ ಉಲ್ ಹಕ್‌ರು ರಿಜಾ ಕಿಸಾಸ್ ದಿಸ್ತ್ ಹುದೂದ್ ಎಂಬ ಇಸ್ಲಾಮಿಕ್ ಕಾನೂನುಗಳನ್ನು ಅಂಗೀಕರಿಸಿದ ಮೇಲೆ ಪಾಕಿಸ್ತಾನಿ ಮಹಿಳೆಯರ ಗೋಳು ಇಮ್ಮಡಿಸಿದೆ. ಅಲ್ಲಿಯ ಸಮಾಜ ಎಷ್ಟೊಂದು ಪತನಗೊಂಡಿದೆಯೆಂದರೆ ಪ್ರಣಯ ವ್ಯವಹಾರದ ಅನುಮಾನದ ಮೇಲೆ ಗಂಡಸು ತನ್ನ ತಾಯಿ | ಪತ್ನಿ | ಮಗಳು | ಸೋದರಿಯನ್ನು ಕೊಂದು ಹಾಕಿದಾಗ ಪಾಕಿಸ್ತಾನಿ ಉರ್ದು ಪತ್ರಿಕೆಗಳು ಅಂತಹ ಕೊಲೆಗಳನ್ನು ಸಮರ್ಥಿಸಿದವು.

# ದೊಡ್ಡವರು

(ದೃಷ್ಟಾಂತ ಕತೆ(

ಆಕಾಶದೆತ್ತರಕ್ಕೆ ತಲೆಯೆತ್ತಿ, ಭೂಮಿಯಗಲಕ್ಕೆ ರೆಂಬೆ ಚಾಚಿ, ಗಜಗಾತ್ರದ ಕಾಂಡದೊಡನೆ ಸಹಸ್ರಾರು ಮಿಡಿಕಾಯಿ ಹೊತ್ತು. ಬೀಗುತ್ತ ನಿಂತ ಹಳೆ ಮಾವಿನ ಮರ ಪಕ್ಕದಲ್ಲಿ ಆಗಷ್ಟೇ ತಲೆಯೆತ್ತಿ ಎರಡೇ ಎರಡು ಎಲೆ ಹಲ್ಲು ಕಿರಿದ ಹುಲ್ಲಿಗೆ ಹೇಳಿತು.

"ಇಕಾ, ಇಲ್ಲಿ ನೋಡು, ನಾವು ಎಷ್ಟೆತ್ತರ-ಇಷ್ಟೊಂದು ಅಗಲ-ಬೆಟ್ಟ ಗಾತ್ರದ ತೋರ ಕಂಡೆಯಾ"

ಹುಲ್ಲು ತಲೆ ಎತ್ತಿತು-ಎತ್ತಿತು-ಬೆನ್ನು ಹಿಂದೆ ಬಾಗಿ ಮುರಿದು ಹೋಗುವಂತೆ ಕತ್ತು ಚಾಚಿತು. ಊಹೂಂ, ಎಲೆ-ಕಾಯಿ-ಕಾಂಡ, ಎತ್ತರ-ದಪ್ಪ ಒಂದೂ ಇಲ್ಲ. ಅದರ ಮಿಣುಕುಗಣ್ಣಿಗೆ ಕಂಡಿದ್ದು ನೆಲದಿಂದ ಮೇಲೆದ್ದ ನಾಲ್ಕಾರು ಬೇರು ಮಾತ್ರ.

"ಅಯ್ಯಾ, ನಿಜವಿದ್ದೀತು ನಿನ್ನ ಮಾತು. ಆದರೆ ಅದಕ್ಕೇನೀಗ?" ಹುಲ್ಲು ಒಳಬಾಯಿಯಲ್ಲೇ ಕಾಂಯ್ ಕುಂಯ್ ಗುಟ್ಟಿತು.

"ಏನೆಂದರೆ ಕಿರಿಯರು ಹಿರಿಯರಿಗೆ ಮರ್ಯಾದೆ ಕೊಡಬೇಕು ಗೊತ್ತಾಯ್ತು?........ನೀರು-ಗೊಬ್ಬರ-ಗಾಳಿ-ಬೆಳಕು-ಅದೇನಿದ್ದರೂ ಅವೆಲ್ಲವೂ ನಮ್ಮದು. ನಾವದನ್ನು ಯಾರಾರಿಗೆ ಏನೇನು ಕೊಡಬೇಕೊ ಎಷ್ಟೆಷ್ಟು ಕೊಡಬೇಕೊ ಎಂದು ಚಿಂತಿಸಿ ಹಂಚಿದ್ದನ್ನು ನೀನು ತಿನ್ನಬೇಕು. ಹುಂ, ತಿಳಿಯಿತಲ್ಲ ಇದು ನಮ್ಮ ಅಜ್ಞೆ........" ಮರ ಹೂಂಕರಿಸಿತು.

"ಆಗಲಿ ಮಹಾನುಭಾವ, ಒಡೆಯ ಹನಿಸಿದ ನೀರೆಲ್ಲಾ ನಿನಗೇ ಇರಲಿ, ಒಡತಿ ಹಾಕಿದ ಗೊಬ್ಬರ ಕೂಡ ನಿನ್ನ ಬುಡಕ್ಕೇ ಬೀಳಲಿ, ನೀನು ಬಿಟ್ಟ ಉಸಿರಿನ ನೀರಾವಿಯಷ್ಟೇ ನನಗೆ ಸಾಕು ಬಿಡು. ಹೇಗೊ ಬದುಕಿಕೊಳ್ಳುತ್ತೇನೆ......." ಬೇರೇನೂ ತೋಚದೆ

ಹುಲ್ಲು ಅಡ್ಡ ಬಿತ್ತು.

ಅದೇ ಹೊತ್ತಿಗೆ ಶರೀರದ ಸಾವಿರ ಪಟ್ಟಿಗಿಂತಲೂ ಸಣ್ಣದಾಗಿರುವ ಗೆದ್ದಲು ಹುಳುವೊಂದು ಒಂದು ಅಂಚಿನಿಂದ ಹಿಡಿದು ಕಾಂಡ ಕೊರೆಯುತೊಡಗಿತ್ತು.

ಮುಂದೆ ಅದೆಷ್ಟೊ ದಿನ - ವಾರ - ತಿಂಗಳು, ಹಗಲು - ರಾತ್ರಿ ಬದಲಾದ ಋತುಮಾನಗಳೊಂದಿಗೆ ಹುಲ್ಲು ತನ್ನ ಸಂಪೂರ್ಣ ಎತ್ತರ ಮುಟ್ಟಿ, ಮತ್ತಲೇ ಸೊರಗಿ ಒಣಗಿ, ಮತ್ತೆ ಬುಡದಿಂದ ಚಿಗುರಿ ಮತ್ತೆ ಒಣಗಿ, ಇನ್ಯಾವುದೊ ಒಂದು ಹೊತ್ತಿನಲ್ಲಿ ಹಸುರು ಹೊದ್ದು ನಿಂತಾಗ "ಲಟ್ - ಲಟ್-ಲಟೆಲ್" "ಹರ ಹರೋ - ಹರ" ಎಂಬ ಮಹಾಶಬ್ದದೊಂದಿಗೆ ಮರ ಉರುಳಿಬಿತ್ತು. ಶಬ್ದಕ್ಕೆ ಎದೆಯೊಡೆದ ಹುಲ್ಲು ತಾಸೊಂದರ ನಂತರ ಥರಥರ ನಡುಗುತ್ತಲೇ ಕಿರುಗಣ್ಣು ಬಿಟ್ಟಾಗ ಗೆದ್ದಲು ಸೊಂಟಕ್ಕೆ ಕೈ ಕೊಟ್ಟು ನಿಂತು ಮೀಸೆ ತಿರುವುತ್ತಾ ಹೇಳಿತು. "ಈಗ ಅರ್ಥವಾಯಿತಲ್ಲ?"

ಹುಲ್ಲು ಸುಮ್ಮನೆ ತಲೆ ಅಲ್ಲಾಡಿಸಿತು. ಯಾಕೆಂದರೆ ಅದು ಅನ್ನಕ್ಕಾಗಿ ಇನ್ನೊಬ್ಬರೆದುರು ಕೈ-ಚಾಚಬೇಕಿರಲಿಲ್ಲ. ವಿನೋದಕ್ಕಾಗಿ ಮತ್ತೊಂದರ ಕಾಲೆಳೆದು ಕೆಡವ ಬೇಕಿರಲಿಲ್ಲ.

ಭಾಗೀರಥಿ ಹೆಗಡೆ.

## ಕಿವಿಮಾತು

"ಕೇಳೆ ಪಾರ್ವತಿ ನಾನಿನ್ನ ಅಪ್ಪ
ನಾನೆಂದಂತೆ ನಡೆ ನಿನ್ನ ಬಾಳದು ಒಪ್ಪ"
"ಕೇಳೆ ಪಾರ್ವತಿ" ಎಂದನಣ್ಣ
"ನನ್ನ ನುಡಿ ಕೇಳೆ ಬದುಕ ತುಂಬಾ ಬಣ್ಣ".

ಬೆನ್ನ ಹಿಂದೆ ಹುಟ್ಟಿ ಬಂದ ತಮ್ಮನೂ
ಹಾಡಿದ್ದ ಹಾಡಿದ ಹಳೆಯ ರಾಗವ
"ಕೇಳೆ ಪಾರ್ವತಿ" "ಕೇಳೆ ಪಾರ್ವತಿ......"
ಬಳಕೆ ಹಳತಾಗಿ ಉನ್ಮಾದ ಏಳಿಯಲು

ಇನಿಯನ ನುಡಿಯು ಆಯ್ತು ಬದಲು
"ಕೇಳೆ ಪಾರ್ವತಿ ನಾನಿನ್ನ ಪತಿ
ನನ್ನನನುಸರಿಸಿ ಪಡೆದಾಗಲೇ ನಿನಗೆ ಸದ್ಗತಿ"

ಒಡಲಿಲ್ಲಿ ಮೂಡಿ ಮಡಿಲಲ್ಲೆ ಬೆಳೆದು
ಎದೆಯೆತ್ತರ ಮೀರಿ ನಿಂತ ತನುಜನೂ
ಊದಿ ಹಾರಿಸಿದ ಕೂಡಿದ್ದ ಬೂದಿಯನು
"ಕೇಳಮ್ಮ ನನ್ನ ಮಾತನ್ನ......"

"ಬ್ಯಾನರು ಹಿಡಿದು ಬೀದಿಗಿಳಿದ ಗೆಳತಿಯರೆ
ನಿಮ್ಮ ಸಮ ನಾವೆಂದು ಕೂಗುವಿರೆ
ಕೇಳಿ ಈ ಪಾರ್ವತಿಯ ಕಿವಿಮಾತು
ಕೇಳಿ ಪಾರ್ವತಿ ಎಂದವರೆಲ್ಲ
ಕೇಳೆ ಪಾರ್ವತಿ ಎಂದಾಗ
ಸ್ವಾತಂತ್ರ ಸಫಲ".

ಎಂ. ಎಚ್. ಲಕ್ಷ್ಮೀನರಸಮ್ಮ.

ಬಿ. ಟಿ. ಎಸ್. ಬಸ್‌ಗಳಲ್ಲಿ ಮಹಿಳೆಯರಿಗೆ ಸೀಟುಗಳ ಮೀಸಲಾತಿಯನ್ನು ಪ್ರಕಟಿಸಿ ತಿಂಗಳುಗಳೇ ಕಳೆದಿವೆ. ಆದರೆ ಅದರ ಉಪಯೋಗ ಸ್ತ್ರೀಯರಿಗೆ ಎಳ್ಳಷ್ಟು ಆಗಿಲ್ಲವೆಂಬುದು ತೀರಾ ಸ್ಪಷ್ಟ. ಅದರಲ್ಲೂ ನಗರದ ಹೊರವಲಯದಿಂದ ಪ್ರಯಾಣಿಸುವ ಮಹಿಳೆಯರು ಬಹಳಷ್ಟು ಕಹಿ ಪ್ರಸಂಗಗಳನ್ನು ಎದುರಿಸಬೇಕಾಗಿದೆ. ಪುರುಷರು ರಾಜಾರೋಷವಾಗಿ ಮಹಿಳೆಯರ ಸ್ಥಳಗಳನ್ನು ಆಕ್ರಮಿಸಿಕೊಳ್ಳುವುದರ ಜೊತೆಗೆ ಸೀಟು ಕೇಳುವ ಮಹಿಳೆಯರನ್ನು ಹೀನಾಮಾನವಾಗಿ ಅವಮಾನಿಸಲಾಗುತ್ತದೆ. ಇದರಿಂದಾಗಿ ಮಹಿಳೆಯರು ಅನಿವಾರ್ಯವಾಗಿ ಮೂಗಿಗಳಾಗಿ ಬಿಡುತ್ತಾರೆ. ಇಂತಹ ಅನುಭವಗಳನ್ನು ಅವಮಾನಕರ ಪ್ರಸಂಗವೆಂದು ಭಾವಿಸದೇ ಮಾನಸಕ್ಕೆ ಬರೆದು ಕಳಿಸಿ. ಹೀಗೆ ಅನುಭವಗಳನ್ನು ಹಂಚಿಕೊಳ್ಳುವುದರ ಮೂಲಕ ಹೆಚ್ಚು ಮಹಿಳೆಯರು ಸಂಘಟಿತರಾಗಿ ದನಿ ಎತ್ತಬಹುದು. ಮಹಿಳೆಯರಿಗಾಗಿ ಸ್ಥಳ ಮೀಸಲಾತಿಯು ಯಶಸ್ವಿಯಾಗಬೇಕಾದರೆ ಕೈ ಗೊಳ್ಳಬೇಕಾದ ಕ್ರಮ, ಸಲಹೆ ಸೂಚನೆಗಳನ್ನು ಬರೆದು ತಿಳಿಸಿ.

ಸಂ. ಮಂ.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ ಬೆಂಗಳೂರು—೫೬೦೦೬೭.

REGD No KRNA 271

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

PRINTED MATTER




C. G. MANJULA
9. 3rd CROSS
MARKHAM ROAD
ASHOK NAGAR
BANGALORE - 560025.


ವಿಳಾಸ : "ಮಾನಸ"
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067